# ವಾನಸಿ

ತಿಂಗಳ ಪತ್ರಿಕೆ

ಜನವರಿ ೧೯೯೧

---

"ಫೆಮಿನಿಸಂ" ಗೆ– ಸಂಬಂಧಿಸಿದಂತೆ

ಸೇವೆ

ಆಟ

ನಾನೇಕೆ ಸ್ತ್ರೀವಾದಿ?

---

# ಮಾನಸ

ಸಂಪುಟ : ೪ ಸಂಚಿಕೆ : ೧

ಜನವರಿ ೧೯೯೧

**ಸಂಪಾದಕೀಯ ಮಂಡಳಿ:**
ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ದು. ಸರಸ್ವತಿ,
ಸವಿತ ಎ., ಗೀತಾ ಜಿ. ಎಸ್., ಗಾಯತ್ರಿ ವಿ.

**ಸಲಹೆ—ಸಹಕಾರ**
ಇಳಾವಿಜಯ

ವಿಳಾಸ "ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ)
ಬೆಂಗಳೂರು—**560067**

ಬಿಡಿಪ್ರತಿ :**2** ರೂ.
ಸೂಚನೆ : ವಾರ್ಷಿಕ ಚಂದಾ :**20**ರೂ.
ಆಜೀವ ಚಂದಾ : **250**ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.


## ಈ ಸಂಚಿಕೆಯಲ್ಲಿ........



# ಸಂಪಾದಕೀಯ

ಸ್ತ್ರೀಯರ ಮೇಲೆ ನೇರವಾದ, ಅಮಾನುಷವಾದ ಕ್ರೂರವಾದ ದಬ್ಬಾಳಿಕೆಯು ಕಂಡು ಬರುವುದರ ಜೊತೆಗೆ ಸೂಕ್ಷ್ಮವಾಗಿ ನಯಗಾರಿಕೆಯಿಂದ ಅವಳ ಅಸ್ತಿತ್ವವನ್ನು ಹತ್ತಿಕ್ಕಿ ಸಮಾಜದಲ್ಲಿ ಅವಳ ದ್ವಿತೀಯ ದರ್ಜೆಯ ಸ್ಥಾನವನ್ನು ದೃಢಪಡಿಸುವ ರೀತಿಯು ಕಂಡುಬರುತ್ತಿರುವುದು ಆಶ್ಚರ್ಯಕರ ಸಂಗತಿಯೇನಲ್ಲ. ಈ ಎರಡು ಮುಖಗಳೊಂದಿಗೆ ತಳಕು ಹಾಕಿಕೊಂಡು ಹತಾಶೆಯನ್ನುಂಟು ಮಾಡುವ ವಿಚಾರವೆಂದರೆ ಸ್ತ್ರೀ ಪರ ಮೌಲ್ಯಗಳನ್ನು ವ್ಯಾಪಾರಿ, ವೃತ್ತಿ, ವೈಯಕ್ತಿಕ ಲಾಭಕ್ಕೆ ಬಳಸಿಕೊಳ್ಳುತ್ತಿರುವ ಮನೋಧರ್ಮ ಹೆಚ್ಚಾಗುತ್ತಿರುವುದು — ಇವುಗಳ ನಡುವೆ ಪ್ರಾಮಾಣಿಕ ಕಾಳಜಿಯಿಂದ ಯಾವುದೇ ಲಾಭವಿಲ್ಲದೆ ಮಾಡುವ ಪ್ರಯತ್ನಗಳಿಗೆ ಉಂಟಾಗುವ ತೊಡಕುಗಳು ಸಾವಿರಾರು.

ಮಾನಸ ಇಂಥದೊಂದು ಕಿರು ಪ್ರಯತ್ನವೆಂದರೆ ನಮ್ಮ ಬೆನ್ನನ್ನು ನಾವು ತಟ್ಟಿಕೊಳ್ಳುವ ಉದ್ದೇಶವೆಂದಲ್ಲ. ಮಾನಸ ಪ್ರಕಟಣೆಯ ಹಿಂದಿರುವ ಕಷ್ಟ, ನೋವು, ಹತಾಶೆ ಎದುರಾಗುವ ಸವಾಲುಗಳನ್ನು ಓದುಗರಲ್ಲಿ ಹಂಚಿಕೊಳ್ಳುವ ದೃಷ್ಟಿಯಿಂದ ಈ ಮಾತುಗಳನ್ನು ಬರೆಯುತ್ತಿದ್ದೇವೆ. ಓದುಗರು ನೀಡುವ ಚಂದಾ ಹಣದಿಂದ ಮಾತ್ರ ಪತ್ರಿಕೆಯನ್ನು ಪ್ರಕಟಿಸುವುದು ತೀರಾ ಕಷ್ಟ. ಪ್ರತಿ ಸಂಚಿಕೆಗೂ ಜಾಹೀರಾತು ಸಿಗುತ್ತದೆಯೆಂಬ ಭರವಸೆಯಿರುವುದಿಲ್ಲ. ಪತ್ರಿಕೆಯನ್ನು ಆರು ತಿಂಗಳು ತರುವುದರಲ್ಲಿ ಎಲ್ಲರೂ ನಿರಾಶೆಯಿಂದ ಕೈ ಚೆಲ್ಲುವಂತಾಯಿತು. ಸಂಪಾದಕ ಮಂಡಳಿಯ ಗೆಳತಿಯರೆಲ್ಲ ಪತ್ರಿಕೆಗೆ ಹಣಕಾಸು ಹೊಂದಿಸುವ ಜವಾಬ್ದಾರಿಯನ್ನು ಹೊತ್ತು, ಚೆಂದಾ, ಆಜೀವ ಸದಸ್ಯತ್ವ, ಜಾಹಿರಾತು ಕೊನೆಗೆ ಸಂಬಳದ ಹಣವನ್ನು ಸಾಲದ ರೂಪದಲ್ಲಿ ಹಾಕಿ ಕೆಲವು ಸಂಚಿಕೆಗಳನ್ನು ಪ್ರಕಟಿಸಿ, ಹೀಗೆ ಮುಂದುವರೆಸಲು ಸಾಧ್ಯವಿಲ್ಲವೆಂದೆನಿಸಿ ಒಬ್ಬೊಬ್ಬರ ನಡುವೆ ಒಳಗೊಳಗೆ ಅಸಹನೆ, ಕೋಪ, ವ್ಯಕ್ತಪಡಿಸಲಾಗದ ಬಿರುಕು, ಅಸಹಾಯಕತೆಯು ಅಸ್ತ್ರಗಳಾಗಿಬಿಟ್ಟವು.

ಆದರೆ ಮಾನಸ ತರಲಾಗದಿದ್ದರೆ ಏನು ಮಾಡುವುದು? ಎಲ್ಲಿ ನಮ್ಮನ್ನು ನಾವು ಗುರುತಿಸಿಕೊಳ್ಳುವುದು? ನಮ್ಮ ಮನಸಾಕ್ಷಿಯ ಅಭಿವ್ಯಕ್ತಿಗೆ ಪತ್ರಿಕೆಯ ಅಗತ್ಯವಿಲ್ಲವೆ? ಜೊತೆಗೆ ಆಜೀವ ಚಂದಾ ಸದಸ್ಯರು.......

ಓದುಗರ ಸಹಾಯ, ಪ್ರೋತ್ಸಾಹ, ಹಾಗೂ ಬೆಂಬಲ ನಮ್ಮ ತಲೆಯ ಮೇಲಿನ ಈ ಹೊರೆಯನ್ನು ಹಗುರ ಮಾಡಬಲ್ಲದು. ಓದುಗರು ಚಂದಾದಾರರಾಗುವುದು, ಚಂದಾ ನವೀಕರಿಸುವುದು ಇತರರೂ ಪತ್ರಿಕೆಯನ್ನೂ ಓದುವಂತೆ ಪ್ರೇರೇಪಿಸುವುದು, ಆಜೀವ ಸದಸ್ಯರ ಜಾಹಿರಾತು ಒದಗಿಸಿ ಕೊಡುವುದು ಮುಂತಾದವುಗಳ ಮೂಲಕ ಪತ್ರಿಕೆಯನ್ನು ಉಳಿಸಿ ಬೆಳಸಿದಂತಾಗುತ್ತದೆ.

# 'ಫೆಮಿನಿಸಂ' ಗೆ--ಸಂಬಂಧಿಸಿದಂತೆ

"ಸ್ತ್ರೀ ವಾದ" ದ ಬಗ್ಗೆ ವ್ಯಾಖ್ಯಾನಗಳೂ, ವಾದ-ವಿವಾದಗಳೂ ತಲೆಯೆತ್ತುತ್ತಿರುವ ಈ ಸಂದರ್ಭದಲ್ಲಿ ಮಾನಸ "ಸ್ತ್ರೀ ವಾದ" ಕ್ಕೆ ಸಂಬಂಧಿಸಿದಂತೆ ಕೆಲವು ಪ್ರಶ್ನೆಗಳನ್ನು ತಯಾರಿಸಿ ಆಯ್ದ ಕೆಲವರಿಗೆ ಕಳುಹಿಸಿತ್ತು. ಅವರ ಅನಿಸಿಕೆಗಳನ್ನು ಆರಿಸಿ ಇಲ್ಲಿ ಪ್ರಕಟಿಸಲಾಗಿದೆ. ಪ್ರಶ್ನೆಗಳು ಈ ಕೆಳಕಂಡಂತೆ ಇವೆ:—

೧) ಫೆಮಿನಿಸಂ - ಈ ವಾದಕ್ಕೆ ಅಥವಾ ಪದಕ್ಕೆ ಏಕೆ ವಿರೋಧಾತ್ಮಕ ಪ್ರತಿಕ್ರಿಯೆ ಕಂಡುಬರುತ್ತಿದೆ ಎಂದು ನಿಮಗನಿಸುತ್ತದೆ?

೨) ಮಹಿಳಾ ಚಳುವಳಿಯು ಪ್ರಸ್ತುತ ಸಂದರ್ಭದಲ್ಲಿ ಯಾವ ರೀತಿಯ ವಿಚಾರಧಾರೆ-ಸಮಸ್ಯೆಗಳ ಮೇಲೆ ಗಮನಹರಿಸುವು ರಿಂದ ಮಹಿಳಾ ಪತ್ರಿಕೆಗಳು ಮಹಿಳಾ ಅರಿವನ್ನು ಹೆಚ್ಚಿಸಲು ಸಾಧ್ಯ ಎಂದು ಅನಿಸುತ್ತದೆ ನಿಮಗೆ?

೩) ಕರ್ನಾಟಕದಲ್ಲಿ ಮಹಿಳಾ ಹೋರಾಟ ಒಂದು ಚಳುವಳಿಯಾಗಿ ಬೆಳೆದಿಲ್ಲ ಎಂಬ ಅಭಿಪ್ರಾಯವಿದೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆ ಏನು?

೪) ಇತ್ತೀಚಿನ ದಿನಗಳಲ್ಲಿ ಬೆಳೆಯುತ್ತಿರುವ "ಮಹಿಳಾ ಪ್ರಜ್ಞೆ" ಯಿಂದಾಗಿ ಬಹಳಷ್ಟು ಕ್ಷೇತ್ರಗಳಲ್ಲಿ ಇದರ ಪ್ರಭಾವ ಕಂಡು ಬರುತ್ತಿದೆ. ಯಾವ ಕ್ಷೇತ್ರಗಳಲ್ಲಿ ಗಮನಾರ್ಹ ಪ್ರಭಾವ ಇದೆ ಎಂದು ನಿಮ್ಮ ಅಭಿಪ್ರಾಯ?

೫) ಪ್ರಸ್ತುತದಲ್ಲಿ "ಮಹಿಳೆ" ಯರ ಸಮಸ್ಯೆಗಳನ್ನು ಕುರಿತು ಮಾತನಾಡುವುದು ಬರೆಯುವುದು ಇತ್ಯಾದಿಗಳಿಂದಾಗಿ ಲಾಭ ಇದೆ ಎಂದು ತಿಳಿದು ಬಂದಿರುವುದರಿಂದ ಅವಕಾಶವಾದಿಗಳು ಈ ಬಗ್ಗೆ ಹೆಚ್ಚು ಗಮನಹರಿಸಿ ಇದರಿಂದ ಲಾಭ ಪಡೆಯುತ್ತಿದ್ದಾರೆ ಎಂಬುದಕ್ಕೆ ನಿಮ್ಮ ಅನಿಸಿಕೆ ಏನು?

೬) ತಲೆಯೆತ್ತುತ್ತಿರುವ ಮಹಿಳಾ ಅಧ್ಯಯನ ಸಂಸ್ಥೆಗಳು, ಮಹಿಳಾ ಅಧ್ಯಯನಗಳು ಮೂಲಭೂತ ಸಿದ್ಧಾಂತಗಳನ್ನು ಎತ್ತಿಹಿಡಿಯುತ್ತಿವೆ ಎಂದು ನಿಮಗನಿಸುತ್ತಿದೆಯೆ?

೭) ಮಹಿಳಾ ಚಳವಳಿಗೆ ಒಂದು ರಾಜಕೀಯವಾದ ಅಭಿವ್ಯಕ್ತಿ ಇದೆಯೇ?

---

೧) ಯಾವುದೇ ಬದಲಾವಣೆಗೆ ಪ್ರತಿರೋಧ ಬರುವುದು ಆ ಬದಲಾವಣೆಯು ಕಾರ್ಯರೂಪಕ್ಕೆ ಬರುವಾಗ. ಬಹಳ ಮಂದಿ ಸ್ತ್ರೀ–ಪುರುಷರ ನಡುವೆ ಸಮಾನತೆ ಇರಬೇಕೆಂದು ವಾದಿಸುತ್ತಾರೆ. ಆದರೆ ಈ "ಸಮಾನತೆ" ಎಂಬ ಪದ ವೈಯುಕ್ತಿಕ ಆಚರಣೆಯಲ್ಲಿ ತರವೇಕಾದಾಗ ಪ್ರತಿಕ್ರಿಯೆ ತಲೆದೋರುವುದು.

ಸ್ತ್ರೀವಾದ ಅಧಿಕಾರದ ಪುನರ್ ಹಂಚಿಕೆಯಾಗಬೇಕೆಂದು ವಾದಿಸುತ್ತದೆ. ಈ ಹಂತದಲ್ಲಿ ತಮ್ಮ ಅಧಿಕಾರವನ್ನು ಕಳೆದುಕೊಳ್ಳುವವರು ಸಹಜವಾಗಿ ಇದನ್ನು ಪ್ರತಿರೋಧಿಸುತ್ತಾರೆ.

೨) ಅದಾಗ್ಯೂ ಒಟ್ಟಾರೆಯಾಗಿ ಸಮಾಜ ಇಂಥ ಪ್ರತಿರೋಧವನ್ನು ಹೊಂದಿದೆಯೆಂದು ನಾನು ಭಾವಿಸಲಾರೆ. ವೈಯುಕ್ತಿಕ ಅಥವಾ ಸಣ್ಣ ಪುಟ್ಟ ಮಹಿಳಾ ವೇದಿಕೆಗಳ ಚಟುವಟಿಕೆಗಳಿಗೆ ಇಂತಹ ಪ್ರತಿರೋಧ ಹೆಚ್ಚಾಗಿ ಕಂಡುಬರುತ್ತಿದೆ. ಕೋಮುವಾದಕ್ಕೆ ಕಂಡುಬರುತ್ತಿರುವ ಪ್ರತಿಕ್ರಿಯೆ ಸ್ತ್ರೀವಾದಕ್ಕೆ ಕಂಡು ಬರುತ್ತಿಲ್ಲ. ಒಂದು ವೇಳೆ ದೇಶವಲ್ಲದೆಯಲ್ಲಿ ಇದಕ್ಕೆ ಪ್ರತಿರೋಧ ಕಂಡು ಬಂದುದಾಗಿದ್ದರೆ, ಸ್ತ್ರೀ ಸಮಾನತೆ, ಸ್ತ್ರೀ ಅಧಿಕಾರದ

ಪ್ರಮುಖ ಉದ್ದೇಶಗಳನ್ನು ಹೊಂದಿರುವ ಮಹಿಳಾ ಸಮುಖ್ಯದಂತಹ ಸಂಸ್ಥೆಗಳಿರಲು ಸಾಧ್ಯವಾಗುತ್ತಿರಲಿಲ್ಲ. ಹಾಗೆಯೇ ರಾಜಕೀಯ ಸ್ತರದಲ್ಲಿ ಮಹಿಳೆಯರಿಗೆ ಮೀಸಲಾತಿಯನ್ನು ಹೆಚ್ಚಿಸುವ ಬದಲು ಇರಾನಿನಲ್ಲಿ ನಡೆದ "ಮನೆಗೆ" ಮರಳಿ ಚಳುವಳಿಗಳನ್ನು ನಾವು ಎದುರಿಸಬೇಕಾಗುತ್ತಿತ್ತು.

ನಾನು ತಿಳಿದಂತೆ ಪರ್ಯಾಯ ವ್ಯವಸ್ಥೆಯ ಒಂದು ಸ್ಪಷ್ಟರೂಪವನ್ನು ಕಂಡು ಹಿಡಿಯಲು ಸಾಧ್ಯವಾಗದಿರುವುದು ಒಂದು ದುರ್ಬಲ ಅಂಶವಾಗಿದೆ. ಲಿಂಗ ಬೇಧವಿಲ್ಲದ ಒಂದು ಆದರ್ಶ ಸಮಾಜದಲ್ಲಿ ಮಕ್ಕಳನ್ನು ಪಾಲನೆ ಪೋಷಣೆ ಮಾಡುವಲ್ಲಿ ಸ್ತ್ರೀಯರ ಪಾತ್ರವೇನು ಎಂಬುದರ ಬಗ್ಗೆ ನಾವು ಸ್ಪಷ್ಟವಾಗಿ ಉತ್ತರಿಸುವುದಿಲ್ಲ. ಮಕ್ಕಳ ಪೋಷಣೆಯ ಸಮಾಜೀಕರಣ, ಶಿಶುಪಾಲನಾ ಕೇಂದ್ರ ಬೇಕೆಂದು ಮಾತ್ರ ನಾವು ಹೇಳುತ್ತಿದ್ದೇವೆ. ಪ್ರಸ್ತುತದಲ್ಲಿರುವ ಕುಟುಂಬ ವ್ಯವಸ್ಥೆಯೇ ಮುಂದುವರಿಯುವುದೇ ಎಂಬ ಪ್ರಶ್ನೆಯು ಬಹುತೇಕ ಮಹಿಳೆಯರನ್ನು ಕಾಡುತ್ತಿದೆ. ಸ್ತ್ರೀ ವಾದ ಕನಸಿಸುವ ಆದರ್ಶ ಸಮಾಜದಲ್ಲಿ ಯಾವ ಬಗೆಯ ಬಂಧ–ಸಂಬಂಧಗಳಿರಬಹುದು? ಪರ್ಯಾಯ ಸಮಾಜದ ನಮ್ಮ ಪರಿಕಲ್ಪನೆಯೇನು? ಸ್ತ್ರೀಪರ ಕಾಳಜಿಗಳನ್ನು ಅಂತಹ ಸಮಾಜ ಹೇಗೆ ಪ್ರತಿಬಿಂಬಿಸುತ್ತದೆ. ಎಂಬುದರ ಬಗ್ಗೆ ಮಹಿಳಾ ಪತ್ರಿಕೆಗಳು ಆಳವಾಗಿ ವಿಶ್ಲೇಷಿಸಬೇಕೆಂದು ನಾನು ಭಾವಿಸುತ್ತೇನೆ. ಕೆಲವೇ ಮಹಿಳೆಯರಲ್ಲದೆ, ಎಲ್ಲಾ ಮಹಿಳೆಯರ ಕಾಳಜಿಗಳನ್ನು ಸ್ತ್ರೀವಾದ ಪ್ರತಿಬಿಂಬಿಸುತ್ತದೆಯೆಂದಾಗಿ ಮಾತ್ರ ಬಹುಪಾಲು ಮಹಿಳೆಯರು ಸ್ತ್ರೀವಾದದೊಂದಿಗೆ ತಮ್ಮನ್ನು ತಾವು ಗುರುತಿಸಿಕೊಳ್ಳಬಲ್ಲರು.

ಭವಿಷ್ಯದ ಬಗೆಗಿರುವ ಕಲ್ಪನೆ ವರ್ತಮಾನವನ್ನು ಬಲಪಡಿಸುತ್ತದೆ. ಹೊಸ ಸಮಾಜದ ಬಗ್ಗೆ ಓದುಗರ ದೃಷ್ಟಿಕೋನಗಳನ್ನು ಆಹ್ವಾನಿಸಿ ಪ್ರಕಟಿಸುವುದರ ಮೂಲಕ ಇದನ್ನು ಮಾಡಬಹುದು. ಹಾಗೂ ಕುಟುಂಬ ಗಂಡು ಹೆಣ್ಣಿನ ಸಂಬಂಧ, ಮಕ್ಕಳನ್ನು ಹೆರುವ, ಪಾಲನೆ–ಪೋಷಣೆ ಮುಂತಾದ ವಿಷಯಗಳಿಗೆ ಸಂಬಂಧಪಟ್ಟಂತೆ, ಭಾವೀ ಸಮಾನ ಸಮಾಜದ ಕಲ್ಪನೆಯ ಹಿನ್ನೆಲೆಯಲ್ಲಿ 'ಸ್ತ್ರೀ ವಾದಿ' ಬರಹಗಾರರು, ವಿದ್ವಾಂಸರು, ಕಾರ್ಯಕರ್ತರು, ಲೇಖನಗಳನ್ನು ಬರೆಯಬಹುದು.

೩) ಮೊದಲಿಗೆ ಚಳುವಳಿ ಎಂಬುದನ್ನು ಹೇಗೆ ವ್ಯಾಖ್ಯಾನಿಸುತ್ತೇವೆಂಬುದರ ಬಗ್ಗೆ ಸ್ಪಷ್ಟವಾಗಿರಬೇಕು ನನ್ನ ದೃಷ್ಟಿಯಲ್ಲಿ ಚಳುವಳಿ ಕೆಲವು ಸ್ಪಷ್ಟದೃಷ್ಟಿಕೋನಗಳನ್ನು ಹೊಂದಿರಬೇಕು, ಜನ ಸಮೂಹದ ಬೆಂಬಲ ಶೋಷಿತ ಜನಾಂಗದಿಂದ ಮೂಡಿಬಂದ ನಾಯಕತ್ವ, ಸುಸಂಘಟಿತರಾದ ಕಾರ್ಯಕರ್ತರು, ಸಂಘಟನಾ ಚಾತುರ್ಯ ಭೌಗೋಳಿಕ ವ್ಯಾಪಕತೆಯನ್ನು ಹೊಂದಿದ, ನಿಖರವಾದ ಸಿದ್ಧಾಂತ, ಭವಿಷ್ಯದ ಬಗ್ಗೆ ಸ್ಪಷ್ಟ ದೃಷ್ಟಿಕೋನ, ನಿರ್ದಿಷ್ಟ ರಾಜಕೀಯ ಗುರಿಗಳನ್ನು ಚಳುವಳಿ ಹೊಂದಿರಬೇಕು. ಆದ್ದರಿಂದ ಕರ್ನಾಟಕದಲ್ಲಿ ಮಾತ್ರವೇಕೆ ಇಡೀ ದೇಶದಲ್ಲಿಯೇ ಮಹಿಳಾ ಚಳುವಳಿಯನ್ನು ಕಾಣಲು ಸಾಧ್ಯವಿಲ್ಲ. ಹೀಗೆಂದಾಕ್ಷಣ ವಿಭಿನ್ನ ಸ್ಥಳಗಳಲ್ಲಿ ಹೋರಾಟಗಳನ್ನು ನಡೆಸುತ್ತಿರುವ ಸ್ತ್ರೀ ಸಂಘಟನೆಗಳು ಚಳುವಳಿಯ ರೂಪವನ್ನು ತಳೆಯುವುದಿಲ್ಲ ಎಂದರ್ಥವಲ್ಲ

೪) ಆಶ್ಚರ್ಯವೆಂದರೆ ನಾನು ತಿಳಿದಂತೆ "ಮಹಿಳಾ ಪ್ರಜ್ಞೆ"ಯ ಪ್ರಭಾವ ಹೆಚ್ಚಾಗಿ ಕಂಡುಬರುವುದು ಸರ್ಕಾರದ ನೀತಿಗಳಲ್ಲಿ, ಬಹಳ ಮಂದಿ ಈ ವಾದವನ್ನು ಒಪ್ಪದಿರಬಹುದು. ಉದಾ: ೧೯೮೬ ರಲ್ಲಿ ಜಾರಿಗೆ ಬಂದ ಹೊಸ ಶಿಕ್ಷಣ ನೀತಿಯನ್ನು ತೃತೀಯ ವಿಶ್ವದಲ್ಲಿ ಪ್ರಪ್ರಥಮವಾದ ದಾಖಲೆ ಎನ್ನಬಹುದು. ಅದರಂತೆ ಸ್ತ್ರೀ ಸಮಾನತೆಯನ್ನು ದೊರಕಿಸಿಕೊಡುವಲ್ಲಿ ಶಿಕ್ಷಣ ಪ್ರಮುಖ ಅಸ್ತ್ರ. ಅಂದರೆ ಸಾರ್ವಜನಿಕವಾಗಿ ಸ್ತ್ರೀಯರ ಸಮಾನತೆಯನ್ನು ಒಪ್ಪಿದಂತಾಯಿತು. ಇದು ತುಟಿಯ ಮೇಲಿನ ಮಾತು ಎಂದರೂ ಸುಮ್ಮನೆ ತಳ್ಳಿಹಾಕುವಂತಹುದಲ್ಲ. ಈ "ತುಟಿಯ ಮೇಲಿನ ಮಾತು" ಸಹ ಅಮೇರಿಕದಂಥ ದೇಶಗಳಲ್ಲಿ ಬಂದಿಲ್ಲ. ಏಕೆಂದರೆ "ಸಮಾನ ಹಕ್ಕುಗಳ ಮಸೂದೆ" ಅಲ್ಲಿ ಶಾಸನ ಸಭೆಯಲ್ಲಿ ಮತ್ತೆ ಮತ್ತೆ ಸೋಲನ್ನಪ್ಪುತ್ತಲೇ ಬಂದಿದೆ. ಹಾಗೆಯೇ ಚುನಾವಣೆಗಳಲ್ಲಿ ಸ್ತ್ರೀಯರಿಗಿರುವ ಮೀಸಲಾತಿ ವಿಶೇಷವಾಗಿ ನಮ್ಮ ರಾಜ್ಯದಲ್ಲಿ ರಾಜಕೀಯವಾಗಿ ಸ್ತ್ರೀಯರ ಶಕ್ತಿಯನ್ನು ಅಥವಾ ಬಲವನ್ನು ಬಿಂಬಿಸುತ್ತದೆ ಎನ್ನಬಹುದು. ಅಷ್ಟೇ ಅಲ್ಲದೆ ರಾಷ್ಟ್ರೀಯ ಮಹಿಳಾ ಆಯೋಗವನ್ನು ಎಷ್ಟು ದೇಶಗಳಲ್ಲಿ ಕಾಣಬಹುದು? ಇವನ್ನು ಕೆಲವರು

ಸಮಯಂ ಸಾಧಕತನ ಎಂಬಾರು, ಆದರೆ ಇವು ಅಷ್ಟು ಸರಳವಲ್ಲ. ಇವುಗಳನ್ನು ಪಡೆಯಲು ನಾವು ಮಾಡಬೇಕಾಗಿ ಬಂದ ಸಾಹಸಗಳು ಅಷ್ಟಿಷ್ಟಲ್ಲ. ಆದರೆ ಇವು ಇಷ್ಟಕ್ಕೇ ನಿಲ್ಲದೆ ಸಾಗುತ್ತಿರುತ್ತವೆ. ಇವೇನಿದ್ದರೂ ಬಣೆಯ ತೆಳುವಾದ ತುದಿಯಷ್ಟೇ.

ಮಹಿಳಾ ಪ್ರಜ್ಞೆಯ ಪ್ರಭಾವಕ್ಕೊಳಗಾದವುಗಳು ಎಂದರೆ, ವರದಕ್ಷಿಣೆ, ಅತ್ಯಾಚಾರ......, ಇತ್ಯಾದಿ. ಈ ಪ್ರಕರಣಗಳ ಸಂಖ್ಯೆಯೇನೂ ಕಡಿಮೆಯಾಗಿಲ್ಲ ನಿಜ, ಆದರೆ ಇವುಗಳ ವಿರುದ್ಧ ಸಾರ್ವತ್ರಿಕ ಅರಿವು, ಜಾಗೃತಿ ಮೂಡುತ್ತಿರುವುದಂತೂ ಸತ್ಯ.

೫) ಮಹಿಳಾ ಸಮಸ್ಯೆಗಳ ಚಿತ್ರಣ ಸಮಾಜದ ಪ್ರಮುಖವಾದ ಅಥವಾ ಮಧ್ಯಮವರ್ಗದ ಬುದ್ಧಿಜೀವಿಗಳ ದೃಷ್ಟಿಕೋನವನ್ನು ಪ್ರತಿಬಿಂಬಿಸುತ್ತದೆ. ಸಮೂಹ ಮಾಧ್ಯಮಗಳಿಗೆ ತಮ್ಮದೇ ಆದ ಒತ್ತಡಗಳಿರುತ್ತವೆ. ಪ್ರಸರಣಾ ಆದಾಯವನ್ನು ಹೆಚ್ಚಿಸುವ ಜಾಹಿರಾತುಗಳು, ಒಂದು ವರ್ಗದ ಓದುಗರು, ಹೀಗೆ ಮಾರುಕಟ್ಟೆಯ ವ್ಯಾವಹಾರಿಕತೆಯನ್ನು ಬಿಂಬಿಸುತ್ತದೆಯೇ ಹೊರತು ಸಾಮಾಜಿಕ ಬದಲಾವಣೆಯಿಂದಲ್ಲ. ಮಹಿಳಾ ಸಮಸ್ಯೆಗಳನ್ನು ಚಿತ್ರಿಸುವ ರೀತಿಯು ಲಾಭಪಡೆಯುವ ಉದ್ದೇಶದಿಂದ ಸಂಪೂರ್ಣವಾಗಿ ಮುಕ್ತವಾಗಿರಬೇಕೆಂದು ನಿರೀಕ್ಷಿಸುವುದು ಅವಾಸ್ತವವೆಂದೆನಿಸುತ್ತದೆ. ಆದ್ದರಿಂದ, ಸತಿ, ಪೋಲೀಸ್‌ಠಾಣೆಗಳಲ್ಲಿ ಇತರ ರಕ್ಷಣಾ ಗೃಹಗಳಲ್ಲಿ ನಡೆಯುವ ಅತ್ಯಾಚಾರ, ವಧುದಹನ, ಮುಂತಾದವುಗಳಿಗೆ ಸಿಗುವಷ್ಟು, ಪ್ರಚೋದಾತ್ಮಕ ಪ್ರಚಾರ, ಆರ್ಥಿಕ ಹಕ್ಕುಗಳಿಗೆ ಹೋರಾಡುವ ಮಹಿಳೆಯರಿಗೆ ಸಿಗುವುದಿಲ್ಲ.

ಇಂತಹ ಸಂದರ್ಭಗಳಲ್ಲಿ ನಾವು ಐತಿಹಾಸಿಕ ದೃಷ್ಟಿಕೋನದಿಂದ ನೋಡಬೇಕಾಗುತ್ತದೆ. ೨೦ ವರ್ಷಗಳ ಹಿಂದೆ ಸಮೂಹ ಮಾಧ್ಯಮಗಳು ಪರಿಗಣಿಸದ ಇರುವಂತಹ ಸಂಗತಿಗಳು ಇದು ಜನಪ್ರಿಯ ಹಾಗೂ ಸಾಮಾನ್ಯ ವಸ್ತುಗಳಾಗಿವೆ. ಇಂತಹ ವಸ್ತುಗಳನ್ನು ಪ್ರಚಾರ ಸಿಗುವುದು ಬೇಡ ಎನ್ನುವುದಕ್ಕಿಂತ ಸನ್ನಿವೇಶದ ದುರ್ಲಾಭ ಪಡೆಯುವ ಮನೋಭಾವನೆಯ ವಿರುದ್ಧ ಹೋರಾಡಬೇಕು. ಮಹಿಳಾ ಸಂಘಟನೆಗಳು, ಪತ್ರಕರ್ತರೊಂದಿಗೆ ಹಾಗೂ ಚಿತ್ರ ನಿರ್ಮಾಪಕರೊಂದಿಗೆ ಸಂದರ್ಭೋಚಿತವಾದ ಹಾಗೂ ಸೃಜನಾತ್ಮಕವಾಗಿ ಸ್ತ್ರೀ ಸಮಸ್ಯೆಗಳನ್ನು ಚಿತ್ರಿಸಲು ಸಾಧ್ಯವಿಲ್ಲವೆ? ಮಹಿಳಾ ಪ್ರಜ್ಞೆ ಪ್ರಭಾವ ಬೀರಿದ ಇನ್ನೊಂದು ಕ್ಷೇತ್ರವೆಂದರೆ ಸಮೂಹ ಮಾಧ್ಯಮಗಳು

೬) ನಾನು ಬಾಂಬೆಯಲ್ಲಿಯ "ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಸೋಶಿಯಲ್ ಸೈನ್ಸಸ್" ಅಧ್ಯಾಪಿಕೆಯಾಗಿದ್ದಾಗ ಇಡೀ ನಮ್ಮ ರಾಷ್ಟ್ರದಲ್ಲಿ ಕೇಲವು ಶಿಕ್ಷಣ ಸಂಸ್ಥೆಗಳಲ್ಲಿ ಮಹಿಳಾ ಅಧ್ಯಯನ ಮಾಡಲು ಅವಕಾಶಗಳಿದ್ದವು. ಮಹಿಳಾ ಅಧ್ಯಯನದ ಬಗ್ಗೆ ಸ್ಪಷ್ಟವಾದ ರೂಪು-ರೇಷೆಯನ್ನು ನಿರ್ಧರಿಸುವಂತಹ ಕಾರ್ಯಕ್ರಮಗಳಿರಲಿಲ್ಲ. ಹೆಚ್ಚಿನೆಡೆಗಳಲ್ಲಿ ಯು.ಜಿ.ಸಿ. ಯಿಂದ ಅನುದಾನ ಸಿಗುತ್ತದೆಂಬುದೊಂದೇ ಕಾರಣಕ್ಕಾಗಿ, ಉದ್ಯೋಗ ಸಿಗುತ್ತದೆ ಎಂಬ ಆಸೆಯಿಂದ ಪ್ರಾರಂಭಿಸಿದ್ದಷ್ಟೇ ಹೊರತು, ಪ್ರಾಧ್ಯಾಪಕ ವರ್ಗ, ಕಾಲೇಜ್, ವಿಶ್ವವಿದ್ಯಾನಿಲಯಗಳಿಗೆ ಅತ್ಯಗತ್ಯವೆಂಬ ಕಾರಣದಿಂದ ಪ್ರಾರಂಭಿಸಿರಲಿಲ್ಲ. ಇದರಿಂದಾಗಿ ಇಂದು ಸ್ತ್ರೀವಾದ ಮತ್ತು ಅದರ ಸಿದ್ಧಾಂತಗಳ ಅರಿವಿಲ್ಲದ ಬೋಧಕ ವರ್ಗದವರು ಮಹಿಳಾ ಅಧ್ಯಯನಕ್ಕೆ ರೂಪುರೇಷೆ ನೀಡಿ, ಬೋಧಿಸುವಂತಾಗಿದೆ. ಇವರೊಂದಿಗೆ ನಾನು ಮಾತನಾಡಿದಾಗ ತಿಳಿದು ಬಂದ ವಿಷಯವೆಂದರೆ, ಪ್ರಸ್ತುತ ಸ್ತ್ರೀ ಸಮಸ್ಯೆಯ ಬಗ್ಗೆ ಅವರಿಗೆ ನಂಬಿಕೆ ಇದ್ದಂತಿರಲಿಲ್ಲ. ಮಹಿಳಾ ಅಧ್ಯಯನದ ರೀಡರ್ ಒಬ್ಬರು ಒಮ್ಮೆ ತಮಗೇ ಮಹಿಳಾ ಸಮಸ್ಯೆಯ ಬಗ್ಗೆ ನಂಬಿಕೆಯಿಲ್ಲವೆಂದಿದ್ದರು. ಈ ಸಂದರ್ಭದಲ್ಲಿ ಇಂಥ ರೀಡರ್‌ಗಳು ಎಂತಹ ಸಿದ್ಧಾಂತಗಳನ್ನು ಬೋಧಿಸಬಲ್ಲರು? ಆದ್ದರಿಂದ ಮಹಿಳಾ ಅಧ್ಯಯನಗಳನ್ನು ಸ್ತ್ರೀಯರ ಪರಿಸ್ಥಿತಿಯನ್ನು ವಿವರಿಸುತ್ತವೆ ಅಥವಾ ಅವರಿಗೆ ಸಂಬಂಧಿಸಿದ ಅಂಕಿ-ಅಂಶಗಳ ದಾಖಲೆ ನೀಡುತ್ತವೆ ಎಂದರೆ ಹೆಚ್ಚು ಸಮಂಜಸ. ಇವು ವಿದ್ಯಾರ್ಥಿಗಳಿಗೆ, ಸ್ತ್ರೀಯರು ಆರ್ಥಿಕ, ಆರೋಗ್ಯ, ಶಿಕ್ಷಣ ಸಾಮಾಜಿಕ, ಜೀವನ ಎದುರಿಸುವ ಅನಾನುಕೂಲತೆಗಳು ಹೇಗೆ ಉಂಟಾಗುತ್ತವೆ, ಕಾರಣಗಳೇನು ಎಂಬುದನ್ನು ಮಾತ್ರ ತಿಳಿಸುವುದಿಲ್ಲ. ವಿದ್ಯಾರ್ಥಿಗಳಿಗೆ ವಿಶ್ಲೇಷಣಾತ್ಮಕವಾಗಿ ಈ ಅಸಮಾನತೆಗಳನ್ನು ಅರ್ಥಮಾಡಿಕೊಳ್ಳುವ ಚೌಕಟ್ಟನ್ನು ಇವು ನೀಡುವುದಿಲ್ಲ. ಸ್ತ್ರೀ ದೃಷ್ಟಿಕೋನದ ಕೊರತೆಯೇ

ಇದಕ್ಕೆ ಪ್ರಮುಖ ಕಾರಣವಾಗಿದೆ.

೭) ಸತ್ಯವಾಗಿಯೂ! ನನ್ನ ಮೆಚ್ಚಿಗೆ ಹೇಳುವುದಾದರೆ ಯಾವುದೇ ಶೋಷಿತ ಜನಾಂಗದಿಂದ ಮೂಡಿ ಬರುವ ಹೋರಾಟಗಳು, ಅವು ಯಾವುದೇ ರೂಪದಲ್ಲಿರಲಿ ಅದು ಒಂದು ರಾಜಕೀಯ ಅಭಿವ್ಯಕ್ತಿಯಾಗಿರುತ್ತದೆಯೆಂದೇ ನಾನು ಭಾವಿಸುತ್ತೇನೆ.

ಶ್ರೀಲತಾ ಬಾಟ್ಲಿವಾಲ
"ಮಹಿಳಾ ಸಾಮಖ್ಯ"

೧) ಯಾವುದೇ ಚಳವಳಿಯ ಉದ್ದೇಶದಲ್ಲಿ ಸ್ಪಷ್ಟತೆ ಮುಖ್ಯ. ಮತ್ತು ಅದರ ಬೇಡಿಕೆಗಳು ಮನುಷ್ಯ ಸಂಬಂಧಗಳಲ್ಲಿರುವ ಮೂಲಭೂತ ಗುಣಗಳನ್ನು ಒಳಗೊಳ್ಳುವುದೂ ಮುಖ್ಯ. ಹಾಗೆ ಇತರರನ್ನು ಒಳಗೊಳ್ಳುವಂತೆ ಅರ್ಥಮಾಡಿಸಲಾಗದೇ ಹೋದ ಯಾವುದೇ ಚಳವಳಿಗೆ ಸಹಾನುಭೂತಿಯ ಪ್ರತಿಕ್ರಿಯೆ ಸಹ ಸಿಗುವುದಿಲ್ಲ, ಈ ದಿಕ್ಕಿನಲ್ಲಿ "ಫೆಮಿನಿಸ್ಟ್" ಚಳವಳಿ ತಪ್ಪು ಹೆಜ್ಜೆಗಳನ್ನು ಬೇಗ ಅರ್ಥಮಾಡಿಕೊಂಡು–ಸರಿಪಡಿಸಿಕೊಳ್ಳುತ್ತ ರೂಪುಗೊಳ್ಳುತ್ತಿರುವ ರೀತಿಯಲ್ಲಿ ವಿರೋಧಾತ್ಮಕ ಪ್ರತಿಕ್ರಿಯೆಯ ಪ್ರಮಾಣ ಕಡಿಮೆಯಾಗುತ್ತಿದೆಯಲ್ಲ!

೨) ತುಂಬ ಸೂಕ್ಷ್ಮವಾದ ವಿಚಾರ. ಇಲ್ಲಿ ಬದಲಾವಣೆ ಸ್ತ್ರೀ-ಪುರುಷರಿಬ್ಬರ ಅಂತರಂಗದಲ್ಲಿ ಆಗಬೇಕಾದ್ದು. ಕಾರ್ಮಿಕರ ಹಾಗೆ, ಒಂದು ಖಚಿತ ಮತ್ತು ಸಾಧ್ಯವಾಗಿಸಬಹುದಾದ ಹೊರಮೈಯ ಬದಲಾವಣೆ-ಸರಿಹೊಂದಿಸಿಕೊಳ್ಳುವ ಬದಲಾವಣೆ ಇದಲ್ಲ. ಆದ್ದರಿಂದ "ಸತ್ಯ" ವನ್ನ ಮನಸ್ಸಿಗೆ ತಾಗುವಂತೆ ಬದುಕಿನ ಬಹು ಮುಖ್ಯವಾದ ಒಂದುಅಂಶವನ್ನು ಬಹುಕಾಲ ನಿರ್ಲಕ್ಷಿಸಿ ರೂಪಗೆಡಿಸಿದ್ದನ್ನ ಆತನಿಗೆ ಅರ್ಥವಾಗುವಂತೆ ಹೇಳುವುದು, ಎಂಥ ದಿವ್ಯ ನಿರ್ಲಕ್ಷ-ಅಜ್ಞಾನಗಳ ಫಲವಾಗಿ ತಾನು ಇಂದಿನ ಈ ಸ್ಥಿತಿಗೆ ಕಾರಣಳಾದೆ ಎಂಬುದನ್ನು "ಆಕೆ" ಗೂ ಹೇಳುವ ಕೆಲಸ ಬಹಳ ಸೂಕ್ಷ್ಮವಾದ ನೆಲೆಯಲ್ಲಿ ಆಗಬೇಕು. ಇಲ್ಲಿ ಆಕ್ರೋಶ, ಅಬ್ಬರ, ದೋಷಗಳ ನೇರ ಹೊಡೆತ ಕೆಲಸಕ್ಕೆ ಬರುವುದಿಲ್ಲ ಎಂದು ಅನ್ನಿಸುತ್ತದೆ.

೩) ಕರ್ನಾಟಕದಲ್ಲಿ ಯಾವ ಹೋರಾಟವೂ ಇರಬೇಕಾದ ಪ್ರಮಾಣದಲ್ಲಿ ತ್ವರೆಯಲ್ಲಿ ಚಾಲ್ತಿಗೆ ಬಂದಿಲ್ಲ— ಅದು ಇತಿಹಾಸ. ಅದಕ್ಕೆ ಅದರದೆ ಆದ ಚಾರಿತ್ರಿಕ ಭೌಗೋಳಿಕ ಕಾರಣಗಳಿವೆ. ಆದರೆ ನಿನ್ನೆಗಳಷ್ಟು ನಾಳೆಗಳು ದೀರ್ಘವಾಗಲಾರವು ಅನಿಸುತ್ತದೆ.

೪) ಏಕೊ ಒಪ್ಪಲು ಮನಸ್ಸಾಗುತ್ತಿಲ್ಲ. ಇದು "ಮೀಸಲಾತಿ" ಯಂಥ ಸರಳವಿಧಾನಕ್ಕೆ ಒಪ್ಪಿಸಿಕೊಂಡಂತೆ ಭಾಸವಾಗುತ್ತಿದೆ. ಇದಿಷ್ಟೇ ಸಾಧನೆ ಎಂದು ಭಾವಿಸಬೇಕಾಗಿಲ್ಲ. ಇನ್ನೂ ಕೊಡುವ ಪಡೆಯುವ ಬೇಡುವ ಹಂತದಲ್ಲೇ ಇರುವುದನ್ನು ಸಮಾನತೆಯೆನ್ನಲಾದೀತೆ? ಇದು ಒಂದು ಪ್ರಾಥಮಿಕ ಹಂತ ಎಂದು ಒಲ್ಲದ ಮನಸ್ಸಿನಿಂದ ಒಪ್ಪಬಹುದೇನೋ!

೫) ಇದು ಎಲ್ಲ ರಂಗದಲ್ಲೂ ಆಗುವಂಥದ್ದು. ಅವಕಾಶವಾದಿಗಳೆಲ್ಲೆಡೆಯೂ ಇರುತ್ತಾರೆ. ಬೇಳೆಗಳೂ ಬೇಯುತ್ತವೆ. ಅದನ್ನು ಮೀರಿ ಬೆಳೆಯಲು, ಸಾಧಿಸಲು ಏನು ಮಾಡುತ್ತೇವೆ ಎಂಬುದು ಮುಖ್ಯ. ಅವಕಾಶವಾದಿಗಳ ಮೆರವಣಿಗೆಗೆ ದಾರಿ ಮಾಡುತ್ತ ಅಲವತ್ತುಕೊಂಡರೆ ಮತ್ತಷ್ಟು ಸರಿಪಡಿಸಲಾಗದ ತಪ್ಪುಗಳಿಗೆ ನಾವೂ ಕಾರಣರಾಗುತ್ತೇವೆ. ಕಳೆ ಕೀಳಬೇಕು. ಭೂಮಿಯನ್ನು ಹದಗಬೇಕು. ಅಲ್ಲವೇ?

೬) ದಿಕ್ಕು ಕಂಡುಕೊಳ್ಳುವ ಪ್ರಯತ್ನಗಳ ಉದ್ದೇಶದಲ್ಲಿ ದೋಷವಿರಬಾರದು. ಪರಿಣಾಮಕ್ಕಾಗಿ ಕಾಯಬೇಕು. "ಸ್ತ್ರೀ ವಾದ" ದ ಮೂಲಭೂತ ಸಿದ್ಧಾಂತವೇ ಸರಿ. ಅದನ್ನು ಎತ್ತಿ ಹಿಡಿಯಲೇಬೇಕು ಎಂಬ ಪೂರ್ವ ನಿರ್ಧಾರಗಳಿಗಿಂತ ಇಂಥ ಕೇಂದ್ರಗಳ ಅಧ್ಯಯನ ಹೊಸ ನೀತಿ ರೂಪಿಸುತ್ತವೋ, ಶೋಧಿಸುತ್ತವೋ ಎಂದು ನಿರೀಕ್ಷಿಸಬೇಡವೆ? ನನಗೆ ಇನ್ನೂ ಒಂದು ಸ್ಪಷ್ಟರೂಪ "ಸ್ತ್ರೀ ವಾದ" ಎಂಬ ಮಾತಿನ ಹಿಂದೆ ಇದೆ ಎಂತಲೇ ಒಪ್ಪಲಾಗುತ್ತಿಲ್ಲ. ಆಗುವ ಕೆಲಸಕ್ಕೆ ಸಂಶಯದ ಕಣ್ಣಾದರೆ ನಾವು ಈಗಾಗಲೇ ಇತರ ದೇಶಗಳ ಅನುದಾನಕ್ಕಾಗಿ ಸಂತೆಗೆ ಮೂರು ಮೊಳ ನೇಯುವ "ಪ್ರಗತಿಪರರ" ತೆಕ್ಕೆಗೆ

ಭಾರತೀಯ ಸಂಸ್ಕೃತಿಯನ್ನು ತಳ್ಳುತ್ತಿರುತ್ತೇವೆ. ಮುಂದೊಮ್ಮೆ ಎಲ್ಲವನ್ನೂ ಮಾರಿಕೊಂಡವರಾಗಿ ಕಾಯಲು ಹರಿಶ್ಚಂದ್ರನಿಗೆ ಸಿಕ್ಕಷ್ಟು "ನೆಲ"ವೂ ಇರದ ಶೂನ್ಯದಲ್ಲಿ ನಿಂತು ಬಿಡುತ್ತೇವೆ. ಇಲ್ಲಿ ಸ್ಥಳೀಯರ ಆಲೋಚನೆಗಳಿಗೆ ಪ್ರಯತ್ನಗಳಿಗೆ ಬೆಂಬಲ ಸಹಮತ ಚರ್ಚೆಗಳ ಮೂಲಕ ಉತ್ತರ ಕಂಡುಕೊಳ್ಳುವುದು ಅವಶ್ಯ ಆಗಬೇಕಾದ ಕೆಲಸ.

೭) "ಚಳವಳಿ" ಎಂದು ಹೇಳಿಕೊಂಡದ್ದೆಲ್ಲ ಅದೇ ಆದೀತೆ? ಒಂದು "ಚಳವಳಿ" ಆಗುವುದಕ್ಕಿರುವ ಮಿತಿಗಳನ್ನು ಮೊದಲ ಪ್ರಶ್ನೆಗೆ ಸಿಗುವ ಉತ್ತರವೇ ಬಿಡಿಸುತ್ತದೆ. ದೊಡ್ಡ ಶಬ್ದ ಬಳಸಿದರೆ ಅದೇ ಆಗುವುದಿಲ್ಲ. ಇನ್ನು ರಾಜಕೀಯ ಅಭಿವ್ಯಕ್ತಿ........ ನೀವು ಏನನ್ನು ನಿರೀಕ್ಷಿಸುತ್ತೀರಿ? ಈ ಹೊತ್ತಿನ ರಾಜಕಾರಣದ ಹಿನ್ನೆಲೆಯಲ್ಲಿ ನಿಮ್ಮ ಮಾತಾದರೆ ಅಂಥ ಅಭಿವ್ಯಕ್ತಿಯೇ ಬೇಡ ಅನ್ನಬೇಕಾಗುತ್ತದೆ. ಪ್ರಜ್ಞೆಯ ವ್ಯಾಪ್ತಿಯನ್ನು ಮಿತಿಗೊಳಿಸುವ ಪ್ರಯತ್ನ ಮಾಡಬೇಡಿ. ಇಲ್ಲೇ ಹುದೊಡ್ಡ ದುರಂತಕ್ಕೆ ತಳ್ಳಿಕೊಳ್ಳುತ್ತಿರುತ್ತೇವೆ.

ಡಾ|| ವಿಜಯಮ್ಮ.

೧) "ಫೆಮಿನಿಸಂ" ಎಂಬ ಪದ, ಯಾವ ಅರ್ಥದಲ್ಲಿ ಮುಂಚೆ ಉಪಯೋಗಿಸುತ್ತಿದ್ದರೋ ಅದರ ಪ್ರಕಾರ ಮಹಿಳೆಯರ ಸಮಸ್ಯೆಗಳನ್ನು ಒಂದು ನಿರ್ದಿಷ್ಟ ಆಯಾಮದಿಂದ ಮಾತ್ರವೇ ನೋಡುವ ಪ್ರಯತ್ನವಾಗಿತ್ತು. ಆದ್ದರಿಂದ ಅದಕ್ಕೆ ನಿಮ್ಮ ಹೇಳಿಕೆ ಪ್ರಕಾರ ಸಂಕೀರ್ಣತೆಗಳು ಕಾಣಬಹುದು. ಆದರೆ ಇಂದು ಮಹಿಳೆಯರ ಸಮಸ್ಯೆಗಳನ್ನು ನೋಡುವ ಸಂದರ್ಭ ಸಾಕಷ್ಟು ವಿಸ್ತ್ರತವಾಗಿರುವುದರಿಂದ ಈ ಪದದ ಅರ್ಥ ಮತ್ತು ಪರಿಭಾಷೆಯನ್ನು ಪುನರ್ವಿಚಾರ ಮಾಡಬೇಕಾಗುತ್ತದೆ.

ಮುಂಚೆ ಜನರು "ಫೆಮಿನಿಸಂ" ಎಂದರೆ ಸಿಗರೇಟ್ ಸೇದುವ ಮಹಿಳೆಯರ, ಪುರುಷರ ವಿರುದ್ಧದ ಹೋರಾಟವೆಂದು ತಿಳಿದಿದ್ದರು. ಆದರೆ ಈ ದಿನಗಳಲ್ಲಿ ಯಾವುದೇ ಸಮಸ್ಯೆಗಳ ವಿರುದ್ಧ ಸಮಾನವಾಗಿ ಹೋರಾಟ ಮಾಡಬೇಕು ಮತ್ತು ಪುರುಷರ ಜೊತೆ ಸಮಾನ ಅಧಿಕಾರ ಪಡೆಯಬೇಕು. ಇದಕ್ಕೆ ನಿರಂತರ ಚಳುವಳಿ ನಡೆಸಿದ್ದಾರೆ.

೨) ಸಮಾಜದಲ್ಲಿ ಯಾವುದೇ ವೈಷಮ್ಯಗಳಿರಲಿ ಸುಮಾರು ಎಲ್ಲವೂ ಮಹಿಳೆಯರಿಗೆ ನೇರವಾಗಿ ಸಂಬಂಧಿಸುತ್ತದೆಂಬುದು ನಮ್ಮ ಅನುಭವ. ವರದಕ್ಷಿಣೆಯ ಸಮಸ್ಯೆಯಾಗಲಿ, ಕೋಮುವಾದದ ಸಮಸ್ಯೆಯಾಗಲಿ, ಅನಕ್ಷರತೆಯ ಸಮಸ್ಯೆ ಅಥವಾ ಜಾತಿವಾದದ ಸಮಸ್ಯೆಯಾಗಲಿ, ಎಲ್ಲವೂ ಮಹಿಳೆಯರ ವೈಯಕ್ತಿಕ ಮತ್ತು ಸಾಮಾಜಿಕ, ಆರ್ಥಿಕ ಜೀವನವನ್ನು ಕ್ಷೋಭೆಸುತ್ತದೆ. ಈ ಎಲ್ಲಾ ಸಮಸ್ಯೆಗಳ ವಿರುದ್ಧ ಹೋರಾಟ ಮಾಡುವುದರ ಮೂಲಕ, ಮಹಿಳೆಯರು ಪುರುಷರ ಜೊತೆ ಸಮಾನತೆಯನ್ನು ಪಡೆಯಬೇಕು. ಆದ್ದರಿಂದ ನನಗೆ ಅನಿಸಿರುವ ಮಟ್ಟಿಗೆ ಸಮಾಜದ ಎಲ್ಲಾ ಸಮಸ್ಯೆಗಳ ಬಗ್ಗೆ, ವಿಚಾರಾತ್ಮಕ ವಿಶ್ಲೇಷಣೆ ಮಹಿಳಾ ಪತ್ರಿಕೆಗಳಲ್ಲಿ ಮೂಡಿ ಬರಬೇಕು.

೩) ಇಡೀ ಭಾರತದಲ್ಲಿ ಮಹಿಳಾ ಚಳುವಳಿ ಆದಾಗ ಕರ್ನಾಟಕವನ್ನು, ಅದರಿಂದ ಭಿನ್ನವಾಗಿ ನೋಡುವುದಕ್ಕೆ ಆಗುವುದಿಲ್ಲ. ಇಲ್ಲಿಯ ಮಹಿಳೆಯರು ಕೂಡ ಆ ಸಂಪೂರ್ಣ ಚಳವಳಿಯ ಅಂಗವಾಗಿದ್ದರು.

ಚಳವಳಿ ಎಂದರೆ ಬರೀ ಧ್ವಜ ಹಿಡಿದುಕೊಂಡು ಮೆರವಣಿಗೆ ಮಾಡುವುದಲ್ಲ. ಸುಮಾರು ಎರಡು ದಶಕಗಳಿಂದ ಎಲ್ಲಾ ರೀತಿಯ ಸಾಧನೆಯನ್ನು ಬಳಸಿಕೊಂಡು ಮಹಿಳೆಯರಲ್ಲಿ ಜಾಗೃತಿಯನ್ನು ಉಂಟು ಮಾಡುವುದಕ್ಕೆ ನಡೆಸಿದ ನಿರಂತರ ಪ್ರಯತ್ನಗಳೇ ದೊಡ್ಡ ಚಳುವಳಿಯಾಗಿ ಪರಿಣಮಿಸಿದೆ. ಕರ್ನಾಟಕದ ಮಹಿಳೆಯರು ಕೂಡ ಇದರಲ್ಲಿ ಮುಖ್ಯ ಪಾತ್ರ ವಹಿಸಿದ್ದಾರೆ. ಮಹಿಳೆಯರ ಚಳವಳಿಯಿಂದಲೇ ಕೆಲವು ಕಾನೂನುಗಳು ಮಹಿಳೆಯರ ಪರವಾಗಿ ಬಂದಿವೆ. ಇವನ್ನು ಮರೆಯಬಾರದು.

೪) ಈ ರೀತಿಯ "ಜನರಲೈಸೇಷನ್" ಎಲ್ಲಾ ಕ್ಷೇತ್ರದಲ್ಲಿ ಸಾಧ್ಯ. ಆದರೆ ಮಹಿಳೆಯರ "ಭಾಗವ

ಹಿಸುವಿಕೆ" ಇನ್ನೂ ಹೆಚ್ಚಾಗಬೇಕು, ಒಂದು ಗಮನಾರ್ಹ ವಿಷಯವೇನೆಂದರೆ ಮಹಿಳೆಯರಲ್ಲಿ ಮೂಡಿದ ಈ ಪ್ರಜ್ಞೆಯಿಂದಾಗಿ ಅವರ ಬದುಕಿನಲ್ಲಿ ಇಂದು ಒದಲಾವಣೆ ಕಾಣುತ್ತದೆ. ಶೋಷಣೆಗಳಿಂದ ಅವರು ಮುಕ್ತಿ ಪಡೆಯುವುದಕ್ಕೆ ಪ್ರಯತ್ನಿಸುತ್ತಿದ್ದಾರೆ,

೩) ತುಂಬ ನೋವನ್ನುಂಟು ಮಾಡುವ ಸಂಗತಿ.

೬) "ಸ್ತ್ರೀವಾದ" ಕುರಿತ ಪ್ರಾರಂಭದ ಪ್ರಶ್ನೆಯ ಉತ್ತರದಲ್ಲಿ ನಿರೂಪಿಸಿದ್ದೇನೆ,

೭) ಕೆಲವು ಸಂದರ್ಭಗಳಲ್ಲಿ ಮಾತ್ರ.

ಮೀರಾ ಚಕ್ರವರ್ತಿ.
"ಮಾನಿನಿ"

0 0 0 0 0

## ಏನು ಭರವಸೆ.........ಹೇಳು ಗೆಳೆಯಾ

ಏನು ಇಲ್ಲ ಹೇಳುವಂತೆ, ನಿನ್ನ ಪುಟದ ಅಲೆಗಳ ಮೇಲೆ
ನಾ ಅನುಗಾಲ ನಿನ್ನಲ್ಲಿ ನಿಲ್ಲ ಬಲ್ಲೆಯಂತ, ಹೇಳಲು ಏನಿದೆ ನಿನ್ನಲ್ಲಿ ಸಾಕ್ಷಿ
ನನ್ನತನ ತೇಲಿ ಹೋದರು ತರೆಗೆಲೆಯಂತೆ, ಕೇಳುವವರಿಲ್ಲ, ಹೇಳುವವರಿಲ್ಲ

ನಿನ್ನ ಕ್ಷಣಿಕ ಕಾಮಕೆ ಹೂನ ಮುಳುಗಿದರೆಂತು
ಈ ಕಗ್ಗತ್ತಲೆಯ ನಾಡಿನ ಸಾಗರದಲಿ, ಹೇಳ ಹೆಸರಿಲ್ಲದಂತೆ
ನಗುವವರ ಮುಂದೆ ನಗೆಯಾಗಿ, ಹಗೆಗಳು ಬಯಸುವ ಹೊಗೆಯಾಗಿ
ಅಳಸಿ ಹೋದಿತು ನನ್ನ.........,ನನ್ನ ಬಾಳು

ನಿನ್ನಾರ್ಭಟ ಅಲೆಯ ಮೇಲೆ ನನ್ನ ಬದುಕು ನಿಲ್ಲುವುದೆ
ತೇಲಿ ಹೋಗದಂತೆ, ಏನು ಭರವಸೆ, ಹೇಳು ಗೆಳೆಯಾ
ಹೃದಯ ಸಾಕ್ಷಿಯ ದೃಢ ನುಡಿಯ
ನಿನ್ನಲ್ಲಿ ನಿನಗಾಗಿ, ನನ್ನನ್ನು ನಿನಗಾಗಿ ಅರ್ಪಿಸುವ ಮುನ್ನ.

ರತ್ನಾತನಯ ಮಂಜು.

o o o o

# ಅಕ್ಕ ಪಕ್ಕ

ಪ್ರಕೃತಿಯ ಮತ್ತು ತಾಯಿತನದ ಸೊಗಸಾದ ಎಲ್ಲ ಅಂಶಗಳನ್ನೂ ಪ್ರತಿನಿಧಿಸುವಂಥ ಮಹಿಳೆಯರ ಬಗ್ಗೆ ನನಗೆ ಅತ್ಯಂತ ಉನ್ನತವಾದ ಗೌರವವಿದೆ. ಅವರ ಧ್ಯೇಯಗಳಿಗಾಗಿ ಮತ್ತು ಅವರ ಜೀವನಮಟ್ಟ ಉತ್ತಮಗೊಳ್ಳುವುದಕ್ಕಾಗಿ ನಾನು ಈ ಹಿಂದೆಯೂ ಹೋರಾಡಿದ್ದೇನೆ, ಮುಂದೆಯೂ ಹೋರಾಡುತ್ತೇನೆ.

ರಂಗನಾಥ ಮಿಶ್ರ.

ಸರ್ವೋಚ್ಚ ನ್ಯಾಯಾಲಯದ ಶ್ರೇಷ್ಠ ನ್ಯಾಯಾಧೀಶ (ಮಹಿಳೆಯರು ಪುರುಷರ ಜತೆ ಸ್ಪರ್ಧಿಸಬಾರದು ಎಂಬ ತಮ್ಮ ಹೇಳಿಕೆಯನ್ನು ವಾಪಸ್ಸು ಪಡೆಯುತ್ತ)

ರಾಜಕೀಯ ಪ್ರತಿನಿಧಿಗಳಿಗಿಂತ ಸಾಂಸ್ಕೃತಿಕ ಪ್ರತಿನಿಧಿಗಳು ಎಷ್ಟೋ ಉತ್ತಮ. ಮಾತನಾಡಿದ ಶಬ್ದಗಳು ಕೇಳಿ ಮರೆಯುವಂತದ್ದು. ನೃತ್ಯ ಪ್ರದರ್ಶನವೊಂದು ಮನದಲ್ಲಿ ಬಹುಕಾಲ ಉಳಿಯುವಂಥದ್ದು.

ವೈಜಯಂತಿಮಾಲಾ ಬಾಲಿ,

'ಓಂ ಶಾಂತಿ ಶಾಂತಿ ಶಾಂತಿ' ಬ್ಯಾಲೆ ಪ್ರದರ್ಶನದ ಸಮಯದಲ್ಲಿ ಕಲ್ಕತ್ತೆಯಲ್ಲಿ

ಮುಂದಿನ ಜನ್ಮದಲ್ಲೂ ನಾನು ಒಬ್ಬ ಸಿನಿಮಾ ತಾರೆಯಾಗಲು ಆಶಿಸುತ್ತೇನೆ.

ಲಲಿತಾ ಪವಾರ್,

'ಹಿಂದೂಸ್ತಾನ್ ಟೈಂಸ್' ನಲ್ಲಿ

ನಮಗೇನು ಮಾಡಬೇಕು, ಎಲ್ಲಿಗೆ ಹೋಗಬೇಕು ಎಂದು ಗೊತ್ತಿಲ್ಲ. ನಾಳೆ ಏನು ಎಂಬ ಚಿಂತೆಯಲ್ಲಿ ಮಲಗುತ್ತೇವೆ. ಇಂದೇನು ಕಾದಿದೆ ಎಂಬ ಅರಿವಿಲ್ಲದೆ ಏಳುತ್ತೇವೆ.

ಗೀತಾ ನಾಯಕ್

ಇರಾಕ್ ಆಕ್ರಮಿತ ಕುವೈತ್‌ನಿಂದ ಬಂದಾಕೆ ತನ್ನ ಭವಿಷ್ಯದ ಬಗ್ಗೆ 'ಸಂಡೇ ಟೈಂಸ್' ನಲ್ಲಿ

"ಪ್ರತಿಯೊಬ್ಬ ನಟಿಗೂ ತನ್ನದೇ ಆದ ಸ್ವತಂತ್ರ ವ್ಯಕ್ತಿತ್ವ ಹಾಗೂ ವರ್ಚಸ್ಸಿರುವುದರಿಂದ ಒಬ್ಬರಿಗೊಬ್ಬರನ್ನು ಹೋಲಿಸುವುದು ಸರಿಯಲ್ಲ. ಹಾಗೆ ಮಾಡುವುದು ಅವರಿಗೆ ಅವಮಾನ ಮಾಡಿದಂತೆ. ಹಿಂದಿಯಲ್ಲಾಗಲಿ, ತೆಲುಗಿನಲ್ಲಾಗಲಿ ನನಗಿರುವ ಏಕೈಕ ಪ್ರತಿಸ್ಪರ್ಧಿ ನಾನೇ"

ಭಾನುಪ್ರಿಯ,

ಚಿತ್ರನಟಿ

ಗುರುತಿಲ್ಲದ ಒಬ್ಬ ಮಹಿಳೆ ಬಟ್ಟೆ ಬದಲಾಯಿಸುತ್ತಿರುವುದನ್ನು ನಾನು ನೋಡಿದರೆ ಬಟ್ಟೆ ಇಲ್ಲದೇ ಇದ್ದಾಗ ಆಕೆ ಹೇಗೆ ಕಾಣಬಹುದೆಂಬ ಕುತೂಹಲ ತಾಳಬಹುದು. ಇದು ಪ್ರತಿಯೊಬ್ಬ ಪುರುಷನ ಗೀಳು

ಖುಷ್‌ವಂತ್ ಸಿಂಗ್,

ಅಂಕಣಕಾರ

ಸಂಸ್ಕೃತಿಯನ್ನು (ಸಾಂಸ್ಕೃತಿಕ ಸಂಸ್ಥೆಗಳನ್ನು) ಸರ್ಕಾರ ವಹಿಕೊಂಡಿತೆಂದರೆ, ಅದನ್ನು ನೀವು ಯಾವ ಹೆಸರಿನಿಂದಲಾದರೂ ಕರೆಯಿರಿ, ಅದು ಫ್ಯಾಸಿಸ್ಟ್ ಸಂಸ್ಥೆಯಾಗುತ್ತದೆ. ಹಿಟ್ಲರ್ ಮೊಟ್ಟ ಮೊದಲು ಮಾಡಿದ ಕೆಲಸವೆಂದರೆ ಸಂಸ್ಕೃತಿಯ ಮೇಲೆ ದಾಳಿ.

ಪುಪುಲ್ ಜಯಕರ್.

ಭಾರತ ಭವನದ ಮಾಜಿ ಅಧ್ಯಕ್ಷೆ.

"ಶಿಕ್ಷಣದಲ್ಲಿನ ತಾರತಮ್ಯವನ್ನು ಹೋಗಲಾಡಿಸಲು ಪಠ್ಯಕ್ರಮದಲ್ಲಿ ಸಮಾಜದಲ್ಲಿ ಮಹಿಳೆಯರ ಪಾತ್ರ ಮತ್ತು ಅವರ ಕೊಡುಗೆಯ ಬಗ್ಗೆ ವಿಶೇಷ ಅಧ್ಯಯನ ವಿಷಯವನ್ನು ಸೇರಿಸಬೇಕು. ಹುಡುಗರು ಮತ್ತು ಹುಡುಗಿಯರಿಗೆ ಒಂದೇ ಬಗೆಯ ಪಠ್ಯಕ್ರಮ ಇರಬೇಕು.

ಶಿಕ್ಷಣ ಕುರಿತ ರಾಮಮೂರ್ತಿ ಸಮಿತಿಯ ಸಲಹೆ

ಕೆಲವರು ತಮ್ಮ 70ನೇ ವಯಸ್ಸಿನಲ್ಲಿ ಆಡಳಿತಕ್ಕೆ ಕೈ ಹಾಕಿದ್ದಾರೆ. ನಾನೇನೂ ಅಜರಾಮರಳಲ್ಲ. ಆದರೆ ನನ್ನಲ್ಲಿ ಇನ್ನೂ ಸಾಕಷ್ಟು (ಸಾಮರ್ಥ್ಯ) ಉಳಿದಿದೆ.

ಮಾರ್ಗರೆಟ್ ಥ್ಯಾಚರ್

ಬ್ರಿಟಿಷ್ ಪ್ರಧಾನಿಪಟ್ಟಕ್ಕೆ ರಾಜಿನಾಮೆ ಕೊಡುವ ಮುನ್ನ.

# :ಸೇವೆ:

ಮೇಲ್ಮೇಲೆ ಸ್ಲೋಗನ್,
ನಿಲ್ಲಿಲಿ ಗುಡ್ಡದ ಸೇವೆ,
ಧಿಕ್ಕಾರವಿಲಿ ಬೆತ್ತಲೆ ಸೇವೆಗೆ,
ಒಳಗುಂಟು ನೂರಾಸೆ,
ನಾಲಿಗೆ ನೀರಿಳಿಸಿ,
ಬಿರುಕು ಬಿಟ್ಟ ತುಟಿ ಸವರಿ
ನಗುವ ಊಸರವಳ್ಳಿ ಮಂದಿ
ಸೇವೆ.

ಏನ ನೋಡಬೇಕಿವರು?
ಇಳಿ ಬಿದ್ದ ಮೊಲೆಗಳನೇ?
ಇಲ್ಲಾ......?
ಸುಕ್ಕುಗಟ್ಟ ಹಣ್ಣು
ಹಣ್ಣಾದ ಹೆಣ್ತನವನ್ನೇ?

ತಲೆಯಿಲ್ಲದವರೆಲ್ಲಾ ಬಡ
ಬಡಸಿದರು, ಮುದುರಿಕೊಂಡು,
ಸೆರಗ ಮರೆಯಲ್ಲೇ ನಾರಿ
ಮುಚ್ಚಿದ ಬೆರಳ ಸಂದಿನಿಂದಲೇ
ನೋಡಿ ಕಚ್ಚೆ ಬಿಗಿದು
ಉಸಿರ್ಬಿಡಿದು ಖುಷಿ ಪಟ್ಟರು.

ವರುಷಕ್ಕೊಮ್ಮೆ ನಡೆವ ಜಾತ್ರೆ ನಿಷಿದ್ಧ,
ನಿತ್ಯ ಕಾಣುವ ನೋಟ ಚಿರಂತನ
ಗೋಡೆ-ವಾಡೆ-ಮನೆ-ಮಾರು
ಎಲ್ಲೆಲ್ಲಿಯೂ ಅವಳದೇ
ಸುಂದರ ಚಿತ್ರ-ವಿಚಿತ್ರ ವಿನ್ಯಾಸದ
ಬೆಡಗು ಬಿನ್ನಾಣದ ಬೆತ್ತಲೆ ಪೋಸುಗಳು.

ಇದಕ್ಕೆಂದು ಕೊನೆ?
ಶೋಷಣೆ ವಿರುದ್ಧ ಕೂಡುವ ಮಂದಿಯ
ತೆಕ್ಕೆಯಲ್ಲಿ ಬೆತ್ತಲಾಗಿ ನರಳುವ
ಈ.........ಮುಸುಗ ಗುದ್ದಾಟಕ್ಕೆಂದು
ಕೊನೆ.

ಗಿರಿಜಾ ಎಗ್. ಬಾಳ್ಳುಪೇಟೆ

# ಹೆಣ್ಣು–ಒಂದು ಟಿಪ್ಪಣಿ

'ವುಮನ್ಸ್ ಈರಾ' ದ ವೈಯುಕ್ತಿಕ ಸಲಹೆ ಅಂಕಣ ದಲ್ಲಿ ಪ್ರಕಟವಾದ ಈ ಪ್ರಶ್ನೆ ಮತ್ತು ಅದಕ್ಕೆ ಕೊಟ್ಟಿರುವ ಉತ್ತರವನ್ನು ಗಮನಿಸಿ.

ಮೂರು ಮಕ್ಕಳಾದ ಮೇಲೆ ಈ ಪೋಲೀಸ್ ಅಧಿಕಾರಿ ನಿಯತವಾಗಿ ಬೇರೆ ಹೆಂಗಸರ ಜೊತೆ ಲೈಂಗಿಕ ಸಂಬಂಧ ಇಟ್ಟುಕೊಂಡಿದ್ದಾನೆ ಎನ್ನುವುದು ಒಂದು ಅಂಶವಾದರೆ ತನ್ನ ಹೆಂಡತಿ ಇತರ ಗಂಡಸರ ಮುಂದೆ ಬರಬಾರದು ಯಾರನ್ನೂ ಮಾತನಾಡಿಸಬಾರದೆಂದು ವಿಧಿಸಿರುವ ಕಟ್ಟು ಇನ್ನೊಂದು ಅಂಶ.

ಇದಕ್ಕೆ ಬಂದ ಉತ್ತರ ಎಂತಹದು? ಬಹುಶಃ ನೀನು ಆಕರ್ಷಕವಾಗಿಲ್ಲದಿರಬಹುದು. ಮನೆಯಲ್ಲಿ ನೀನು ಅವನಿಗೆ ಬೇಕಾದ್ದನ್ನು ಕೊಟ್ಟಿದ್ದರೆ ಅವನು ಯಾಕೆ ಹೊರಗೆ ಹೋಗುತ್ತಿದ್ದ? ನಿನ್ನ ಬಗ್ಗೆಯೇ ನೀನು ಮತ್ತೊಮ್ಮೆ ಆತ್ಮಪರಿಶೀಲನೆ ಮಾಡಿಕೋ! ಪಾಪ ತೀವ್ರ ಮಾನಸಿಕ ಒತ್ತಡದಲ್ಲಿ ಬಳಲುತ್ತಿ ಆ ಮಹಿಳೆಗೆ ಇದರಿಂದ ಏನು ಸಮಾಧಾನ ಹೇಳಿದಂತಾಯ್ತು? ಈ ರೀತಿಯ ಸಿರಿತನದ ಗೊಂಬೆಯಾರು ಇಲ್ಲದಿದ್ದರೆ ನಿನ್ನ ಗಂಡ ಹೊರಗೆಲ್ಲೋ ಹೋಗುತ್ತಾನೆ ಎನ್ನುವ ಧೋರಣೆಯನ್ನು ಪದೇ ಪದೇ 'ವುಮನ್ಸ್ ಈರಾ' ಪ್ರತಿಪಾದಿಸುತ್ತಲೇ ಇದ. ಮೂರು ಮಕ್ಕಳ ತಂದೆಯಾದ ಈ ಪೋಲೀಸ್ ಅಧಿಕಾರಿ ತನ್ನ ಹೆಂಡತಿ ಅದೂ ಖಚಿತವಾಗಿ ಗೊತ್ತಿಲ್ಲ, ಊಹೆ ಮಾತ್ರ ಆಕರ್ಷಕವಾಗಿಲ್ಲವೆಂದೋ, ತನಗೆ ಬೇಕಾದ ಲೈಂಗಿಕ ತೃಪ್ತಿ ನೀಡುತ್ತಿಲ್ಲವೆಂದೋ ಬೇರೆ ಹೆಂಗಸರ ಜೊತೆ ಸ್ವೇಚ್ಛಾಚಾರದಲ್ಲಿ ತೊಡಗಬಹುದು. ಅದಕ್ಕೆ ಪರಿಹಾರ ಹಂಡತಿ ತನ್ನ ಬಗ್ಗೆ ಆತ್ಮಪರಿಶೀಲನೆ ಮಾಡಿಕೊಳ್ಳುವುದು! ?

ಇದೇ ಗಂಡ ತನ್ನ ಹೆಂಡತಿ ಇನ್ನೊಬ್ಬರೊಡನೆ ಮಾತೂ ಕೂಡ ಆಡಬಾರದು ಎಂದು ಕಟ್ಟಳೆ ವಿಧಿಸುವುದು ಎಂತಹ ವಿಪರ್ಯಾಸ.

'ವುಮನ್ಸ್ ಈರಾ' ದಲ್ಲಿ ಹೆಚ್ಚಿನ ಮಟ್ಟಿಗೆ ಗಂಡನಿಗೆ ಯಶಸ್ವಿ ಗುಲಾಮಳಾಗಿರುವುದು ಹೇಗೆ ಎನ್ನುವ ಧೋರಣೆಯ ಲೇಖನಗಳನ್ನು ಪ್ರಕಟಿಸುತ್ತದೆ. "ನಿಮಗೆ ಎಷ್ಟೆ ತೊಂದರೆಯಾದರೂ ಸರಿ ಗಂಡ ಹೆಂಡತಿ ಮನೆಗೆ ಬಂದಾಗ ಅವನನ್ನು ಮನೆಯಲ್ಲಿದ್ದವರು ಉಪಚರಿಸಿ" ಎನ್ನುವುದು ಸರಿ. ಆದರೆ "ನಿಮಗೆ ಕಾಯಿಲೆಯಿದ್ದರೂ ಅದನ್ನು ಬದಿಗೊತ್ತಿ ಗಂಡನಿಗೆ ನಗುನಗುತ್ತಾ ಸೇವ ಮಾಡಿ" ಎನ್ನುವ ಉಪದೇಶ ಎಷ್ಟರ ಮಟ್ಟಿಗೆ ಆ ಕಾಯಿಲೆಯಿಂದ ನರಳುತ್ತಿರುವ ಮಹಿಳೆಗೆ ಸೂಕ್ತವಾದುದು?

ಇಂತಹ ಲೇಖನಗಳು ಬಂದಾಗ ಅದರ ಬಗ್ಗೆ ಪ್ರತಿಭಟನೆ ಬೇಕು. ಒಂದೆರಡು ಬಾರಿ ನಾನೇ ಪತ್ರ ಬರೆದಿದ್ದೆ. ಆದರೆ ಆ ಪತ್ರಿಕೆಯ ಧೋರಣೆಯೇ ಅಂತಹದ್ದಾಗಿರುವಾಗ ಇದರಿಂದ ಏನೂ ಪ್ರಯೋಜನವಾಗಲಿಲ್ಲ. ಅದರಲ್ಲಿ ಪ್ರಕಟವಾಗುವ ಕತೆಗಳೂ ಹಾಗೆಯೇ ಇರುತ್ತವೆ. ಇವು ಅದೆ–ವಿಚಾರವಂತ ಮಹಿಳೆಯರ ಮೇಲೆ ಒಂದು ರೀತಿಯ ನೆಗೆಟಿವ್ ಪರಿಣಾಮ ಬೀರುತ್ತದೆ. ಮಾನವೀಯ ನೆಲೆಯಲ್ಲಿ ಹೆಣ್ಣು ಗಂಡು ಪರಸ್ಪರ ಆರೈಕೆ, ಕಾಳಜಿವಹಿಸುವುದು ಸಹಜ. ಆದರೆ ಹೆಣ್ಣು ಜನಾಂಗವು ಗಂಡಿನ ಸೇವೆಗಾಗಿಯೇ ಸೃಷ್ಟಿಗೊಂಡ ದಾಸಕುಲ ಎಂದು ಕತೆ, ಲೇಖನ, ಮೂಲಕ ಪ್ರತಿಪಾದಿಸುವುದು ಎಷ್ಟು ಸರಿ?

ವಿಚಿತ್ರವೆಂದರೆ ಈ ಲೇಖನ, ಕತೆ, ಕವನಗಳನ್ನು ಬರೆಯುವವರು ಹೆಂಗಸರೇ ಆಗಿರುತ್ತಾರೆ.

**ಪ್ರತಿಭಾ ನಂದಕುಮಾರ್.**

---

# ಗಿಡ ಮತ್ತು ಬೆಡಗಿ

ಕೊಕ್ಕರೆಯಂತೆ
ಕುಂಡದಿಂದ ಮೇಲೆ
ಕತ್ತು ಚಾಚಿ
ಅತ್ತ ಇತ್ತ ಸುತ್ತ
ಒಂದೊಂದೆ
ಎಲೆ ಅರಳಿಸಿ
ಬಿಸಿಲಲ್ಲಿ ವಿಕಸಿಸಿ
ನೆರಳಲ್ಲಿ ವಿರಮಿಸುತ್ತೆ ಗಿಡ.

ನದಿಯ ಅಲೆಯಂತೆ
ಸೊಂಟದ ಅಕ್ಷ ತುಳುಕಿಸಿ
ಅರಳಿಸಿ ವಕ್ಷ
ಕನ್ನಡಿಯ ರವಿಕೆ ಮಿರುಗಿಸಿ
ಲಿಪ್‌ಸ್ಟಿಕ್ ತುಟಿಗಳ ತುಸು
ಅಲುಗಿಸಿ
ಶಾಂಪೂ ಕೂದಲ ಬಿರಿಯಿಸಿ
ಹೊತ್ತಿ ಉರಿಯುತ್ತಾಳೆ ಬೆಡಗಿ.

**ಮಧುಮತಿ ಮುಕ್ಕೋಜಿ.**

---

# 'ಆಸ್ತಿ'

ಪ್ರತಿಭಾ ನಂದಕುಮಾರ್.

## ದೃಶ್ಯ ಒಂದು

(ನಾಲ್ಕು ಮಕ್ಕಳು ಸ್ಕೂಲಿಗೆ ಹೋಗುತ್ತಿದ್ದಾರೆ. ಇಬ್ಬರು ಹುಡುಗಿಯರು, ಇಬ್ಬರು ಹುಡುಗರು. ಚೆಂಡನ್ನು ಕಾಲಲ್ಲಿ ಒದೆಯುತ್ತಾ, ತಳ್ಳುತ್ತಾ ಆಟವಾಡಿಕೊಂಡು ಹೋಗುತ್ತಿದ್ದಾರೆ. ಹುಡುಗಿಯರು ಚೆಂಡನ್ನು ಬಿಟ್ಟುಕೊಡದೆ ತಾವೇ ಆಡುತ್ತಿದ್ದಾಗ ಅದನ್ನು ಕಸಿದುಕೊಳ್ಳಲಾಗದೆ ಹುಡುಗನಿಗೆ ಕೋಪ ಬಂದು)

ಹುಡುಗ1 – ಹೋಗೇ, ಇವಳೊಬ್ಳು ಬಂದು ಬಿಟ್ಲು...ನಿನಗ್ಯಾಕೆ ನಮ್ಮ ಬಾಲ್ ಸುಮ್ನನೆ ಕೊಟ್ಟುಬಿಡು

ಹುಡುಗಿ2 – ಯಾಕೋ ಬಾಲ್ ಸಿಕ್ಲಿಲ್ಲಾ ಅಂತ ನನ್ನ ಬೈತೀಯ, ನೀನೇ ತಗೋ ನೋಡೋಣ (ಬಾಲ್ ಒದೆಯುತ್ತಾ ಹೋಗುವಳು)

ಹುಡುಗ2 – ಕೊಡೆ ಸುಮ್ನೆ......ನಾಚಿಕೆಯಾಗಲ್ವಾ.

ಹುಡುಗಿ1 – ಯಾಕೋ ನಾಚಿಕೆ, ನಿನಗಿಂತ ಚೆನ್ನಾಗಿ ನಾನೇ ಆಡ್ತೀನಿ ಅಂತಾನಾ...ಕೊಡಲ್ಲ ಹೋಗು

ಹುಡುಗ1 – ಕೊಡ್ತೀಯೋ ಇಲ್ವೋ?

ಹುಡುಗಿ1 – ಕೊಡಲ್ಲ (ಆಡುತ್ತಲೇ ಇರುವಳು)

(ಹುಡುಗರು ಅವಳನ್ನು ಅಟ್ಟಿಸಿಕೊಂಡು ಹೋಗಿ ಹಿಡಿದು ಕೈ ಹಿಂದೆ ಕಟ್ಟಿ ಬಾಲ್ ಕಿತ್ತುಕೊಂಡು ಹೋಗುತ್ತಾರೆ. ಅವಳು ಮುಖ ಮಾಡಿಕೊಂಡು ಕೆದರಿದ ಕೂದಲು, ಬಟ್ಟೆ ಸರಿಮಾಡಿಕೊಳ್ಳುತ್ತಾ ಇರುವಾಗ ಹುಡುಗಿ–2 ಸುಮ್ಮನೇ ದೂರದಲ್ಲಿ ನಿಂತು ದೃಷ್ಟಿಸುತ್ತಿದ್ದವಳು ನಿಧಾನವಾಗಿ ಹತ್ತಿರ ಬಂದು ಇವಳ ಮುಂದೆ ನಿಂತು, ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಾಳೆ. ಕತ್ತಲು)

## ದೃಶ್ಯ ಎರಡು

ಬೆಳಕು ಮೂಡಿದಾಗ ಇಬ್ಬರು ಹುಡುಗಿಯರು ಕುಂಟಾಬಿಲ್ಲೆಯೋ, ಚೆನ್ನೆಮಣೆಯೋ ಆಡುತ್ತಿರುತ್ತಾರೆ. ಒಬ್ಬ ಅಲ್ಲಿಗೆ ಬರುತ್ತಾನೆ. ಹುಡುಗಿಯರು ಅವನನ್ನು ನೋಡಿ ಮತ್ತೆ ತಮ್ಮ ಪಾಡಿಗೆ ತಾವು ಆಟವಾಡಿಕೊಳ್ಳುತ್ತಿರುತ್ತಾರೆ. ಅವನು ಹೆಗಲ ಮೇಲಿನ ಬ್ಯಾಗಿನಿಂದ ಪುಸ್ತಕ ಪೆನ್ನು ತೆಗೆದುಕೊಂಡು ಏನನ್ನೋ ಬರೆಯುವವನಂತೆ ತೊಡಗುತ್ತಾನೆ. ತಕ್ಷಣ ಹುಡುಗಿ (ಎದ್ದು ಬರುತ್ತಾ)

ಹುಡುಗಿ1 – ದಯವಿಟ್ಟು ಈಗ ನಮ್ಮ ಮೇಲೆ ಕವನ ಬರೀಬೇಡಿ ಅಂಕಲ್.

ಹುಡುಗಿ2 – (ಅಲ್ಲೇ ಕೂತು) ಕವನ, ನಾಟಕ ಬರೆಯೋದು ಬಿಟ್ಟು ನಿಮಗೆ ಮಾಡಕ್ಕೆ ಇನ್ನೇನೂ ಕೆಲಸಾ ಇಲ್ವಾ ಅಂಕಲ್?

ಹುಡುಗಿ1 - ಪುಸ್ತಕ ಮುಚ್ಚಿ ಅಂದ್ರೆ ಮುಚ್ಚಿ...(ಆತನ ಪುಸ್ತಕ ತೆಗೆದು ಬ್ಯಾಗಿನೊಳಗೆ ಹಾಕುತ್ತಾಳೆ)

ಹುಡುಗಿ2 – ಬೇಕಾದ್ರೆ ನಮ್ಮ ಜೊತೆ ಆಡಕ್ಕೆ ಬನ್ನಿ.

ಹುಡುಗಿ1 – ಹೌದು ಹೌದು ಬೇಕಾದ್ರೆ ಆಟಕ್ಕೆ ಸೇರಿಕೊಳ್ಳಿ.

(ವ್ಯಕ್ತಿ ಬಂದು ಇವರ ಜೊತೆ ಆಟಕ್ಕೆ ಸೇರುವನು. ಆಟ ಸರಿಯಾಗಿ ಬರದೆ ತಪ್ಪು ತಪ್ಪಾಗಿ ಆಡುವನು. ಹುಡುಗಿಯರು ನಗುತ್ತಾರೆ. ಅವನೂ ನಗುತ್ತಾನೆ ಕೊನೆಗೆ ಮೂವರೂ ಬಿದ್ದೂ ಬಿದ್ದೂ ನಗುತ್ತಾ ಅಣಕಿಸಿಕೊಳ್ಳುತ್ತಾ ಚಲಿಸುತ್ತಾರೆ ಕೊನೆಗೆ)

ಹುಡುಗಿ1 - ಅಯ್ಯಪ್ಪಾ ಇನ್ನು ನಗಕ್ಕಾಗಲ್ಲಾಪ್ಪಾ

ಹುಡುಗಿ2 – ನಂಗೂ ಸಾಕಾಯ್ತು.........ಹ.........ಹ.........(ಸುಧಾರಿಸಿಕೊಂಡು) ನೀವೊಳ್ಳೆ ಜೋಕರ್ ಅಂಕಲ್.

ಹುಡುಗಿ1 - ಅಂಕಲ್ ನೀವೇನಾದ್ರೂ ಹುಡುಗಿ ಆಗಿದ್ದಿದ್ರೆ ನಿಮ್ಮನ್ನ ಯಾರೂ ಆಟಕ್ಕೆ ಸೇರಿಸ್ಕೊಳ್ತಾ ಇರ್ಲಿಲ್ಲ.

ವ್ಯಕ್ತಿ - (ಯಾಕೆ ಎನ್ನುವಂತೆ ಸನ್ನೆ ಮಾಡುವನು)

ಹುಡುಗಿ2 - ಯಾಕಂದ್ರೆ ನಿಮಗೆ ಆಟ ಆಡಕ್ಕೇ ಬರಲ್ಲ.

ಹುಡುಗಿ1 – (ಪಿಸುದನಿಯಲ್ಲಿ, ಆತನ ಕಿವಿ ಹತ್ತಿರ) ಆಟ ಆಡಕ್ಕೆ ಬರದೇ ಇದ್ರೆ ನಿಮ್ಮನ್ನ ಹುಡುಗಿ ಅಂತಾನೇ ಕರಿಯಲ್ಲ.

ಹುಡುಗಿ2 – (ಅವಳು) ನೀವು ಹುಡುಗಿ ಆಗಬೇಕಾದ್ರೆ ಆಟ ಕಲಿತಿರಬೇಕೂ......

ವ್ಯಕ್ತಿ – ಹಾಗಾದ್ರೆ ಬೇಬಿ.........

(ತಟಕ್ಕನೆ ಇಬ್ಬರು ಹುಡುಗಿಯರೂ ಗಂಭೀರವಾಗಿ ಪ್ರೇಕ್ಷಕರನ್ನು ನೋಡುತ್ತಾ)......

ಹುಡುಗಿ1 – ಬೇಬಿ ಬಗ್ಗೆ ನೀವು ಮಾತಾಡಬೇಡಿ(ನಿಷ್ಠುರವಾಗಿ).

ಹುಡುಗಿ2 – ಬೇಬಿಗೆ ಏನಾಯ್ತು ಅಂತ ನೀವು ಹೀಗೆ ಅವಳ ಬಗ್ಗೆ ಕನವರಿಸ್ತಿದ್ದೀರಾ?

ಹುಡುಗಿ1 - (ಅವನನ್ನು ದೃಷ್ಟಿಸುತ್ತಾ—ಅವನ ಕಡೆಗೆ ತಿರುಗಿ)
ನಿಮ್ಮ ಕವನಕ್ಕೆ ಒಳ್ಳೇ ವಸ್ತು ಅಂತ ಏನು?

ಹುಡುಗಿ2 - ಅವಳು ತನ್ನನ್ನ ತಾನು ನೋಡಿಕೋತಾಳೆ. ನೀವೇನೂ ಅವಳ ಬಗ್ಗೆ ಯೋಚಿಸಬೇಕಾಗಿಲ್ಲ.

ವ್ಯಕ್ತಿ - ಆದ್ರೇ......ಆದ್ರೇ......ಅವಳು ಆಸ್ಪತ್ರೆಯಲ್ಲಿ.........

ಹುಡುಗಿ1 - ಏನು? ಏನು? (ರಭಸದಿಂದ ಅವನ ಹತ್ತಿರ ಬಂದು ಪ್ರಶ್ನಿಸುತ್ತಾ) ಆಸ್ಪತ್ರೆಯಲ್ಲಿ ಸಾಯ್ತಾ ಬಿದ್ದಿದ್ದಾಳೆ ಅಂತ ತಾನೇ? ಹೋಗಿ...ನೀವೂ ಹೋಗಿ ನೋಡಿಕೊಂಡು ಬನ್ನಿ. ಒಳ್ಳೇ ಕವನ ಬರೀಬಹುದು.

ಹುಡುಗಿ2 – ಅವಳು ನೀಲಿ ಸೀರೆ ಉಟ್ಟಾಗ ಚಂದ್ರನ ಬೆಳಕು ಬೀಳುತ್ತಿರುವ ಕಡಲಿನ ಹಾಗೆ ಅಂದವರು ನೀವೇ ತಾನೇ.

ವ್ಯಕ್ತಿ - ನೋಡಿ..... (ಅವನು ಮಾತಾಡುವಷ್ಟರಲ್ಲಿ)

ಹುಡುಗಿ1 – (ಮೂಲೆಯಲ್ಲಿರುವ ಪೊರಕೆ ತಂದು ಕೈಗೆ ಕೊಟ್ಟು) ಸ್ವಲ್ಪ ಕಸ ಗುಡಿಸಿಬಿಡ್ತೀರಾ?

ವ್ಯಕ್ತಿ – (ಮುಖ ಮುಖ ನೋಡುವನು. ಇಬ್ಬರೂ ಬೇರೆ ಎಲ್ಲೋ ನೋಡುತ್ತಿದ್ದಾರೆ. ಅವನು ನಿಧಾನವಾಗಿ ಪೊರಕೆ ಎತ್ತಿಕೊಂಡು ಒಂದು ಕಡೆಯಿಂದ ಗುಡಿಸತೊಡಗುತ್ತಾನೆ. ಗುಡಿಸುತ್ತಾ, ಗುಡಿಸುತ್ತಾ ವೇಗ ಹೆಚ್ಚುತ್ತದೆ. ಸುಸ್ತಾಗುತ್ತಾನೆ. ಹಿನ್ನೆಲೆಯಲ್ಲಿ ತಮಟೆ ಸದ್ದು. ಮೊದಲು ನಿಧಾನವಾಗಿ ಪ್ರಾರಂಭವಾಗಿ ಕ್ರಮೇಣ ಹೆಚ್ಚುತ್ತದೆ, ತಮಟೆ ಸದ್ದಿಗೆ ಸರಿಯಾಗಿ ಗುಡಿಸುತ್ತಾ, ಗುಡಿಸುತ್ತಾ ವ್ಯಕ್ತಿ ತಲೆ ತಿರುಗಿದಂತಾಗಿ ಕುಸಿಯುತ್ತಾನೆ. ಹುಡುಗಿ1 ಹತ್ತಿರ ಬಂದು ನಿಧಾನವಾಗಿ ಅವನ ಕೈಗಳಿಂದ ಪೊರಕೆ ಎತ್ತಿಕೊಂಡು ಒಮ್ಮೆ ಅದನ್ನು ದೃಷ್ಟಿಸಿ ಪ್ರೇಕ್ಷಕರನ್ನು ನೋಡುತ್ತಾಳೆ ಕತ್ತಲೆ,

## ದೃಶ್ಯ ಮೂರು

(ಬೆಳಕು ಮೂಡಿದಾಗ ಒಂದು ಮೂಲೆಯಲ್ಲಿ ಮಂಚದ ಮೇಲೆ ಒಬ್ಬ ರೋಗಿ ಗಿಮಲ

ಬ್ಬಾನೆ. ಒಂದು ಕಡೆ ಹುಡುಗಿ ಹೋಂವರ್ಕ್ ಮಾಡುತ್ತಿದ್ದಾ [illegible]
ಕಡೆ - ಯಾ ಮಧ್ಯದಲ್ಲಿ ಕೂತು ಸರಸರನೆ [illegible]ರಿ ಹೆಚ್ಚುತ್ತಿದ್ದಾ[illegible]

ರೋಗಿ - ನೀರು (ನರಳುತ್ತಾನೆ)

ತಾಯಿ - ಸರಸರನೆ ಒಳಗೆ ಹೋಗಿ ನೀರು ತೆಗೆದುಕೊಂಡು ಬಂದು ಕುಡಿಸಿ [illegible] ಕೂರುತ್ತಾಳೆ)

ರೋಗಿ - ಹಸಿವು (ನರಳುತ್ತಾನೆ)

ತಾಯಿ - (ಸರಸರನೆ ಹೆಚ್ಚಲು ತೊಡಗುತ್ತಾಳೆ)

ಹುಡುಗಿ - ಅಮ್ಮ ಸ್ವಲ್ಪ ಇದು....... (ಕೇಳಲು ಹೋಗುತ್ತಾಳೆ)

ತಾಯಿ - ಸ್ವಲ್ಪ ನೀನೆ ನೋಡಿಕೋಮ್ಮ. ನನಗ ಕಲಸ ಇದೆ. ಆಮೇಲೆ ಬೇಕಾದ್ರೆ ಹೇಳಿಕೊಡ್ತೀನಿ.

(ತರಕಾರಿ ಒಳಗೆ ಎತ್ತಿಕೊಂಡು ಹೋಗುತ್ತಾಳೆ. ಇನ್ನಷ್ಟು ತರಕಾರಿ ಉಳಿಗೆಮಣೆ ಯು ಚಾಕುಮಣೆ ಅಲ್ಲೇ ಇರುತ್ತದೆ. ಲೋಟಗಳಲ್ಲಿ ಗಂಜಿ ಆರಿಸುತ್ತಾ ಬರುತ್ತಾಳೆ. ರೋಗಿಗೆ ಕುಡಿಸಿ ಬಾಯಿ ಒರೆಸುತ್ತಾಳೆ. ಔಷಧಿ ಕೊಡುತ್ತಾಳೆ. ಮಗಳ ಹತ್ತಿರ ಬಂದು ಕೂತು ಪಾಠ ಹೇಳಿಕೊಡುತ್ತಾಳೆ.)

ರೋಗಿ - (ಒಂದಾದ ಮೇಲೊಂದು ಒಂದೇ ಧಾಟಿಯಲ್ಲಿ)

ಸಾಮಾನು ತಂದಾಯ್ತಾ?
ಲೈಟು ಬಿಲ್ಲು ಕಟ್ಟಿದೆಯಾ?
ಬಾಡಿಗೆ ಕೊಟ್ಯಾ
ಡಾಕ್ಟರನ್ನ ಕರೆದುಕೊಂಡು ಬಂದ್ಯಾ?
ರಿಪೋರ್ಟ್ ತಂದ್ಯಾ?
ಸ್ಕೂಲಿಗೆ ಫೀಸು ಕಟ್ಟಿದ್ಯಾ?
ಬಟ್ಟೆ ಒಗೆದ್ಯಾ?
ಪಾತ್ರೆ ತೊಳೆದಾಯ್ತಾ?
ಆಫೀಸಿಗೆ ರಜಾ ಹಾಕಿದ್ಯಾ?
ಅಪ್ಪಂಗೆ ದುಡ್ಡು ಕಳಿಸಿದ್ಯಾ?

(ಇದಕ್ಕಿದ್ದಂತೆ ರೇಗುವ ದನಿಯಲ್ಲಿ ಧ್ವನಿ ಎತ್ತರಿಸುತ್ತ)

ಪಂಚೆ ಯಾಕೆ ಬದಲಾಯಿಸಿಲ್ಲ?
ಅಲ್ಲೇನು ಬಾಗಿಲಲ್ಲಿ ನಿನಗೆ ಕೆಲಸ?
ಕಿಟಕಿ ಯಾಕೆ ತೆಗೆದಿಟ್ಟಿದ್ದೀಯಾ
ಪಾಪೂಗೆ ಹೊಸ ಲಂಗ ತಂದುಕೊಡು ಅಂತ ಹೇಳಿಲ್ವಾ?
ಮೂಲೇಲಲ್ಲಿ ಎಷ್ಟು ಧೂಳಿದೆ ನೋಡು
ಇದೇನು ಈ ಗಂಜಿ ಈ ಥರಾ ಇದೆ
ಏನಂತ ತಿಳಕೊಂಡಿದ್ದೀಯಾ ನೀನು?
ಹಾಗೆ ಇಷ್ಟ ಬಂದ ಥರಾ ಇರೋ ಹಾಗಿದ್ರೆ
ಈಗ್ಲೇ ಗಾಡಿ ಬಿಡು ನಿಮ್ಮಪ್ಪನ ಮನೆಗೆ
ಹೇಳಿದ ಮಾತು ಕೇಳಿಕೊಂಡು ಬಿದ್ದಿದ್ರೆ ಸರಿ
ಇಲ್ಲದಿದ್ರೆ ನೋಡು........... ಮಹಾಗರ್ವ ಬ್ರಹಾಗರ್ವ.........

(ಅಷ್ಟು ಹೊತ್ತಿನವರೆಗೂ ತಾಯಿ ಮಗಳಿಗೆ ಪಾಠ ಹೇಳಿಕೊಡುತ್ತಿರುತ್ತಾಳೆ. ಕೊನೇ ಮಾತು ಬರುವ ಹೊತ್ತಿಗೆ ಹಾಗೇ ವಾಲಿ ಮಂಡಿಯ ಮೇಲೆ ಕೈ ಊರಿ ಮುಖ ಮುಚ್ಚಿಕೊಳ್ಳುತ್ತಾಳೆ. ಹುಡುಗಿ ನಿಧಾನವಾಗಿ ಎದ್ದು ಹೋಗಿ ತಾಯಿ ಮೊದಲು ಕಲಿತಿದ್ದಂತೆಯೇ ತರಕಾರಿ ಹಚ್ಚಲು ಪ್ರಾರಂಭಿಸುತ್ತಾಳೆ ಕತ್ತಲೆ)

ಆಟವಾಡುವ ಹುಡುಗಿ
ನೋಟ ಏತಕೆ ಮರೆತಿ
ಮಂಜು ಬಿಳುಪಿನ ಮೊಗ್ಗೇ
ಅರಳಲೆಷ್ಟು ದಿನ ಬೇಕೇ
ನೋವು ಕಂಬಳಿಯ ಹೊದಿಕೆ
ತೂರಿ ಚಳಿಗೆ ನಡಗುವ ಬಯಕೆ

ತೊಟ್ಟಿಲೊಳಗೆ ಹಸಿಗೂಸು ಕರೆದು
ಬಾಯ್ಬಿಟ್ಟಾಗ ಬಿಗಿದ ಎದೆ
ಎಲ್ಲಿ ಮರೆತಿಟ್ಟು ಬಂದೆ
ನಿನ್ನ ಕುಸುಮ ಕೋಮಲದೊರತೆ
ಮುಳ್ಳು ಬೇಲಿಯ ಹೂವು
ಪಕಳೆ ಹರಿದರೆ ಏನು
ನಗು ನಗುತ ಪರಿಮಳ ಸೂಸಬಾರದೆ ನೀನು?
ಹಕ್ಕಿ ಕುಕ್ಕಿದರೇನು
ಬೀಸು ರೆಕ್ಕೆಯ ಹೊಳವು
ಮನದ ಮಹಾಪೂರ ಉಕ್ಕಿ ಹರಿಯದೇನು?

## ದೃಶ್ಯ ನಾಲ್ಕು

(ಬೆಳಕು ಮೂಡಿದಾಗ ರಂಗವನ್ನು ಪ್ರವೇಶಿಸಿ ಕವಿಯೊಬ್ಬ ಮಧ್ಯ ಬಂದು ನಿಲ್ಲುತ್ತಾನೆ. ಅವನ ಮೇಲೆ ಮಾತ್ರ ಬೆಳಕು. ಬ್ಯಾಗಿನಿಂದ ಕವನವೊಂದನ್ನು ತೆಗೆದು ಓದಲು ತೊಡಗುತ್ತಾನೆ. ಹಿನ್ನೆಲೆಯಲ್ಲಿ "ವಾಹ್ ವಾಹ್" "ಶಭಾಷ್" "ಚೆನ್ನಾಗಿದೆ ಚೆನ್ನಾಗಿದೆ" ಎನ್ನುವ ಉದ್ಗಾರಗಳು ಕೇಳಿ ಬರುತ್ತಿರುತ್ತವೆ)

(ಓದುತ್ತಿರುವ ಅಭಿನಯವನ್ನು ಮೌನವಾಗಿ ಮುಂದುವರಿಸುತ್ತಾನೆ. ಹಿನ್ನೆಲೆಯಲ್ಲಿ "ಈ ಸಾಲಿನ ಅಕಾಡೆಮಿ ಪ್ರಶಸ್ತಿಯನ್ನು ಶ್ರೀಯುತರ "ಆಟ" ಕವನ ಸಂಕಲನಕ್ಕೆ ನೀಡಲಾಗಿದ" ಭಾರೀ ಚಪ್ಪಾಳೆ. ಕವಿ ಸ್ವೀಕರಿಸುವವನಂತೆ ಬಾಗಿ ತೆಗೆದುಕೊಳುತ್ತಾನೆ. ಶಾಲು ಹೊಡೆಸಿಕೊಳ್ಳುವವನಂತೆ ಅಭಿನಯಿಸುತ್ತಾನೆ. ಬಾಗಿ ಪ್ರೇಕ್ಷಕರಿಗೂ ನಮಸ್ಕರಿಸುತ್ತಾನೆ. ಆಟೋಗ್ರಾಫ್ ಸಹಿ ಮಾಡುವವನಂತೆ ಅಭಿನಯಿಸುತ್ತಾನೆ. ಫೋಟೋಗೆ ಪೋಸು ಕೊಡುತ್ತಾನೆ

ಮೂಲೆಯಿಂದ ಹುಡುಗಿ ನಿತ್ರಾಣಳಾಗಿ ಬಾಣಂತಿಯಂತ ಸ್ವೆಟರು, ತಲೆಗೆ ಮಫ್ಲರು ಕಟ್ಟಿಕೊಂಡಿರುತ್ತಾಳೆ, ನಿಧಾನವಾಗಿ ಬರುತ್ತಾಳೆ. ಕವಿಯಿಂದ ಸ್ವಲ್ಪ ದೂರ ಕುಸಿದು ಕೂತು ಅವನನ್ನೇ ದೃಷ್ಟಿಸುತ್ತಾಳೆ. ಕವಿ ಅವೆಲ್ಲವುಗಳಿಂದ ಬಿಡಿಸಿಕೊಂಡು ಬಂದು ಅವಳ ಕೈಗೆ ಪ್ರಶಸ್ತಿಯನ್ನು ಕೊಡುವಂತೆ ನಟಿಸಿ ಹೊರಟು ಹೋಗುತ್ತಾನೆ, ಅವಳು ಅದನ್ನು ಎರಡು ಕೈಗಳಿಂದ ಹಿಡಿದು ದೃಷ್ಟಿಸುತ್ತಾಳೆ. ಕತ್ತಲೆ)

o o o o o

# ಮೌನ ಮಾತಾದಾಗ

ಸ್ತ್ರೀಯರಲ್ಲಿ ಮೂಡುತ್ತಿರುವ ಜಾಗೃತಿ ಹಾಗೂ ಬದಲಾಗುತ್ತಿರುವ ಸಾಮಾಜಿಕ ಪರಿಸರ ದಿಂದಾಗಿ ಸ್ತ್ರೀಯರ ಸಮಸ್ಯೆಗಳನ್ನು ನೋಡುತ್ತಿ ರುವ ದೃಷ್ಟಿಕೋನಗಳು ಬದಲಾಗುತ್ತಿವೆಯಲ್ಲವೆ? ಇಂತಹ ಆಲೋಚನೆ, ವಿಚಾರಗಳು ಅಸ್ಪಷ್ಟವಾ ಗಿದ್ದು ವೈರುಧ್ಯಗಳಿಂದ ಕೂಡಿರಬಹುದು. ಮಹಿಳಾ ಶೋಷಣೆ, ಕೌಟುಂಬಿಕ ಜವಾಬ್ದಾರಿ, ವಿವಾಹ ಪದ್ಧತಿ, ವರದಕ್ಷಿಣೆ, ಅಸಮಾನವೇತನ ಮುಂತಾದ ವಿಷಯಗಳ ಸುತ್ತ ನಿಮ್ಮ ಸ್ವಂತ ವಿಚಾರಗಳನ್ನು ಹಾಗು ಅನುಭವಗಳನ್ನು ಪುಟ್ಟ ಲೇಖನದ ರೂಪ ದಲ್ಲಿ ಬರೆದು ಕಳಿಸಿದ ಲೇಖನಗಳಿಗೆಂದು "ಮೌನ ಮಾತಾದಾಗ" ಅಂಕಣವಿದೆ. ಪ್ರಕಟವಾದ ಲೇಖನಗಳಿಗೆ ಪ್ರತಿಕ್ರಿಯೆಗಳನ್ನು ಪ್ರಕಟಿಸಲಾಗು ವುದು.

ಸಂ. ಮಂ.

## ಆತ್ಮಹತ್ಯೆ ಅನಿವಾರ್ಯವೆ?

ಹೊನ್ನೆ ಅಂದರೆ ೨ ದಿನಗಳ ಹಿಂದೆ ನನ್ನೂರಿನ ಒಬ್ಬ ಯುವತಿ ಹೊಳೆಗೆ ಹಾರಿ ಆತ್ಮಹತ್ಯೆ ಮಾಡಿ ಕೊಂಡಳು. ನಮ್ಮಗಳ ನಡುವೆ ಇದ್ದೂ ಅಜ್ಞಾತ ವಾಗಿದ್ದ ಹದಿಹರೆಯದ ಯುವತಿ ಆತ್ಮಹತ್ಯೆ ಮಾಡಿ ಕೊಂಡಾಗ ಹಿಂದೆ ಮುಂದೆ ಮೇಲೆ ಕೆಳಗೆ ಎಲ್ಲ ಗುಸು ಗುಸು ಬೇಕಾದ ಬೇಡಾದ ಎಲ್ಲ ವಿಷಯಗಳು ಕಾರಣ ಗಳು ಮೌನದ ಮೊಟ್ಟೆಯೊಡದು ತಾನೇ ತಾನಾಗಿ ಬಾಲಬಿಚ್ಚಿಕೊಳ್ಳುತ್ತವೆ. ಇವಳ ಹತ್ಯೆಗೂ ಅದೇ ಮಾಮೂಲಿ ಪ್ರಚಲಿತವಾದ ಕಾರಣ — ಯುವತಿಯ ಮನೆ ತುಂಬಾ ಹೆಣ್ಣುಮಕ್ಕಳು. ತಂದೆ ಮಹಾಕುಡುಕ. ತಾಯಿ ಅಸ್ತಮಾ ರೋಗಿ. ಕೈತುಂಬ ಸಂಬಳ ಬರು ತ್ತಿದ್ದರೂ ಮಕ್ಕಳ ಮದುವೆ ಮಾಡಲಾಗದ ಅಸ ಮರ್ಥ ತಂದೆ, ಯುವತಿಯ ಅಕ್ಕಂದಿರೆಲ್ಲ ಅಂತರ್ಜಾ ತಿಯ ಪ್ರೇಮ ವಿವಾಹವಾಗಿದ್ದರು. ಇವಳೂ ಕೂಡ ಮೊದಲ ಹೆರಿಗೆಗೆ ತಾಯಿ ಮನೆಗೆ ಬಂದವಳು. ಗಂ ಡುಮಗು ಒಂದು ವರ್ಷದ್ದಾದರೂ ಆತ ಕರೆಯಲು ಬರಲಿಲ್ಲ, ಈಕೆ ಹೋಗಲಿಲ್ಲ. ಸುತ್ತಮುತ್ತಲಿನವರ ನಾಲಿಗೆಗೆ ಆಹಾರವಾಗಿ ತನ್ನ ಅದೃಷ್ಟವನ್ನು ಜರಿ ಯುತ್ತ ಕಾಲ ಕಳೆಯುತ್ತಲಿದ್ದಳು. ಗಂಡ ಇನ್ನೊಂದು ಮದುವೆಯಾದ ಎನ್ನುವ ಸುದ್ದಿ ಕೇಳಿ ಮೌನವಾಗಿ ಕಣ್ಣೀರು ಮಿಡಿದಳು. ದಿನ ಕಳೆಯುತ್ತಿದ್ದಂತೆ ಜನರ ಚುಚ್ಚು ಮಾತುಗಳು, ತಂದೆಯ ಅಸಹ್ಯ ನಡಿಗೆ — ಕೊನೇನು ಅನಿಸಿತೋ. ಮಗುವಿನ ಪ್ರೀತಿಯೂ ಅವಳನ್ನು ತಡೆಯಲಿಲ್ಲ. ತಂಗಿಯ ಕೈಗೆ ಮಗುವನ್ನು ಹಾಕಿ. ೨೦ ವರ್ಷಕ್ಕೆ ಹೊಳೆಗೆ ಹಾರಿ ತನ್ನ ಬದುಕಿಗೆ ತಾನೇ ಪೂರ್ಣ ವಿರಾಮ ಇಟ್ಟಳು.

ಹೆಣ್ಣಿನ ಈ ಜೀವನ ಚಕ್ರದ ಬಗ್ಗೆ ಯೋಚಿ ಸುತ್ತ ಹೋದರೆ ಮನಸ್ಸು ಮುದುಡಿಕೊಂಡು ಖಿನ್ನ ವಾಗುತ್ತದೆ. ನೂರಕ್ಕೆ ೭೫ ಭಾಗ ಸ್ತ್ರೀಯರು ಇನ್ನುವ ರೆಗೂ ಸ್ವತಂತ್ರ ಭಾರತದ ಪ್ರಜೆಗಳು ಸ್ವಾತಂತ್ರ್ಯ, ಸಮಾನತೆ, ಇವೆಲ್ಲ ಕೇವಲ ಶೋಕಿಯ ಭಾಷಣ, ಉಪನ್ಯಾಸ, ವಿಚಾರ ಸಂಕಿರಣಗಳಲ್ಲಿ ಪದೇ ಪದೇ ಬಂದುಹೋಗುವ ಪದಗಳು. ಸಂಪೂರ್ಣ ಸ್ವಾತಂತ್ರ್ಯ ಅನುಭವಿಸಿ ಸರ್ವತೋಮುಖ ಬೆಳವಣಿಗೆ ಹೊಂದಿದ ಮಹಿಳೆಯರು ಬೆರಳೆಣಿಕೆಯಷ್ಟು. ಹೆಣ್ಣು ಮಕ್ಕಳು ಐ.ಎ.ಎಸ್. ಆಫೀಸರ್, ಒಬ್ಬ ಇನ್ಸ್‌ಪೆಕ್ಟರ್ ಆಗು ವಷ್ಟು ಮುಂದುವರಿದ ಈ ನಮ್ಮ ದೇಶ ಜಡೆಗಟ್ಟಿದ ಕೂದಲು, ಕೈಯಲ್ಲಿ ಬಟ್ಟಿ ಹಿಡಿದ ಎಲ್ಲಮ್ಮನ ಜೋ ಗತಿ, ಕೆಂಪು ದೀಪದ ಕೆಳಗೆ ಬದುಕುವ ವೇಶ್ಯೆಯಷ್ಟು ಹಿಂದುಳಿದಿದೆ ಕೂಡ. ಮಾನತನದ ಗೌರವ, ಶೀಲ, ಕರ್ತವ್ಯ, ಜವಾಬ್ದಾರಿ ಎಂದೆಲ್ಲಾ ಅವಳ ತಲೆಗೆ ಕಟ್ಟಿ, ಬೇಕಾದ್ದು ಬೇಡಾದ್ದು ಎಲ್ಲ ಅವಳ ಮೇಲೆ ಹೇರಲಾಗುತ್ತದೆ. ಗಂಡಿಗೂ ಇವೆಲ್ಲ ಅನ್ವಯಿಸಿದರೂ ಹೆಣ್ಣಿಗಿರುವಷ್ಟು ಕಟ್ಟಪ್ಪಣೆ, ಹದ್ದುಬಸ್ತು, ಗಂಡ ನ್ನೆಂದೂ ಕಾಡಲಾರದು. ಬಾಲ್ಯ ಕಾಲದಿಂದಲೂ ಆಕೆ ತನ ಬಗ್ಗೆ ತಾನೆ ಕೀಳರಿಮೆ ಬೆಳೆಸಿಕೊಂಡಿರು ತ್ತಾಳೆ ಅಥವಾ ತನ್ನ ಬಗ್ಗೆ ತಾನೆ "ಇನ್‌ಫೀರಿಯಾರಿ ಟಿಟಿ ಕಾಂಪ್ಲೆಕ್ಸ್" ಬೆಳೆಸಿಕೊಳ್ಳುವಂತೆ ಅವಳ ಕೌಟುಂಬಿಕ ಅವಳು ಮಾಡುತ್ತಿರುವ ಈ ಸಮಾಜ ಆಕೆಯೊಂದಿಗೆ ವ್ಯವಹರಿಸುತ್ತದೆ, ವರ್ತಿಸುತ್ತದೆ ಎನ್ನುವ ವಾಸ್ತ...

ಸವಕಲು ನಾಣ್ಯ. ಜೊತೆಗೆ ಈ ಸೌಂದರ್ಯದ ಪಾಲೂ ಇದಕ್ಕೆ ಸೇರಿದರೆ,— ನಾನು ಸುಂದರವಾಗಿಲ್ಲ, ನನ್ನ ಬಣ್ಣ ಕಪ್ಪು, ತಾನು ಇತರರಿಗಿಂತ ಕಡಿಮೆ ಎಂಬುವುದೂ ಸಹ ಆತ್ಮನ್ಯೂನತಾ ಭಾವನೆಗೆ ಕಾರಣವಾಗುತ್ತದೆ. ಇದು ಎಂದಿನವರೆಗೆ ಮನದಲ್ಲಿ ಬೇರೂರಿರುತ್ತದೊ ಅಲ್ಲಿಯವರೆಗೆ ಸರ್ವತೋಮುಖ ಅಭಿವೃದ್ಧಿ ಒಂಟಿಕಾಲಿನ ಓಟನಂತೆ (ಒಮ್ಮೆ "ಮಜನು"ವನ್ನು ಯಾರೊ ಪ್ರಶ್ನಿಸಿದಂತೆ "ಲೈಲಾ ಅಷ್ಟೊಂದು ಸುಂದರಿಯಲ್ಲ ಮತ್ತೆ ಅವಳ ಬಣ್ಣ ಕಪ್ಪು ನೀನೇಕೆ ಅವಳನ್ನು ಅಷ್ಟೊಂದು ಪ್ರೀತಿಸುತ್ತಿಯ" ಎಂದು ಕೇಳಿದರೆ ಮಜನು "ನೀನು ಅವಳನ್ನು ನನ್ನ ಕಣ್ಣುಗಳಿಂದ ನೋಡಿಲ್ಲ" ಎಂದನಂತೆ) ವಧು ಸುಂದರಿಯಾಗಿಲ್ಲ ವರದಕ್ಷಿಣೆ ಹೆಚ್ಚು ಕೊಟ್ಟರೆ ಮಾತ್ರ ಮದುವೆಯಾಗುತ್ತೇನೆ, ಎನ್ನುವ ಮಾತುಗಳು ಸರ್ವೇಸಾಮಾನ್ಯ. ಬಾಹ್ಯ ಸೌಂದರ್ಯವಲ್ಲ ಆಂತರಿಕ ಸೌಂದರ್ಯ ಮುಖ್ಯ. ಮನಸ್ಸು ಮುಖ್ಯ, ಎನ್ನುವ ಮಾತು ಹಳೆಯದಾಗಿ ಹೋಯಿತು. ಈಗ ಎಲ್ಲೆಡೆ ಮಿಾಸಲಾತಿಯ ಹಾವಳಿಯಲ್ಲವೆ ಇಲ್ಲೂ ಕೂಡ.

"ಆತ್ಮಹತ್ಯೆ, ವರದಕ್ಷಿಣೆ ಸಾವು ಇವೆಲ್ಲ ಇತ್ತೀಚಿಗೆ ಹೆಚ್ಚುತ್ತ ಮಾಮೂಲಿ ಎನ್ನುವಂತಾಗುತ್ತಿವೆ. ಹೆಣ್ಣೇಕೆ ಆತ್ಮಹತ್ಯೆ ಮಾಡಿಕೊಳ್ಳಬೇಕು. (ಗಂಡೂ ಇರಬಹುದು ಆದರೆ ಹೆಣ್ಣಿನ ಆತ್ಮಹತ್ಯೆಗೂ ಗಂಡಿನ ಆತ್ಮಹತ್ಯೆಗೂ ಇರುವಂಥ ಕಾರಣಗಳು ತೀರಭಿನ್ನ) ಈ ಆತ್ಮಹತ್ಯೆಯನ್ನು ಬಿಟ್ಟರೆ ಬೇರೆ ದಾರಿಗಳೆ ಇಲ್ಲವೇ? ಆತ್ಮಹತ್ಯೆಗೆ ಪ್ರಯತ್ನಿಸುವಷ್ಟು ಅಸಹನೀಯ ನೋವುಗಳು, ಸಮಸ್ಯೆಗಳು ನಮ್ಮನ್ನು ಕಾಡಿವೆ ಎಂದರೆ ಆ ನೋವಿಗೆ ಔಷಧ, ಸಮಸ್ಯೆಗೆ ಪರಿಹಾರ ನಮ್ಮಲ್ಲಿ ಇರಲಿಕ್ಕೆ ಸಾಕಲ್ಲವೆ? ತೀರ ಸಹಜವಾಗಿ ಬರುವ ಆತ್ಮಹತ್ಯೆಯ ವಿಚಾರವನ್ನು ಒಂದು ಬದಿಗಿಟ್ಟು ಇನ್ನುಳಿದ ಬದುಕುವ ದಾರಿಗಳ ಬಗ್ಗೆ ಯೋಚಿಸಿದರೆ ಅದೆಷ್ಟೊ ಬಾಗಿಲುಗಳು ತೆರೆದುಕೊಳ್ಳುತ್ತವೆ. "ಮುಳುಗುವವನಿಗೆ ಹುಲ್ಲುಕಡ್ಡಿ ಆಸರೆ" ಎಂದ ಹಾಗೆ ಆ ಛಲ, ಹುಮ್ಮಸ್ಸು ಸೋಲೊಪ್ಪಿಕೊಳ್ಳದ ಆ ಅಪ್ರತಿಮ ಮನಸ್ಸು ನಮ್ಮದಾಗಬೇಕು. ನಮ್ಮನ್ನು ನೋಯಿಸಿದ ಆತ್ಮಹತ್ಯೆಯಂಥ ಕೆಲಸಕ್ಕೆ ಪ್ರೇರೇಪಿಸಿದ ನಮ್ಮ ಸುತ್ತ ಮುತ್ತಲಿನ ಜನ, ಸಮಾಜ, ಎಲ್ಲರೆದುರು ನಾನೊಂದು ಉತ್ತಮ ಬದುಕು ಬದುಕಿ ತೋರಿಸುತ್ತೇನೆ ಎನ್ನುವ ಎದೆಗಾರಿಕೆ ನಮ್ಮಲ್ಲಿರಬೇಕಲ್ಲವೆ? ದಾಸರ ನುಡಿಯಂತೆ ಈ ಮಾನವ ಜನ್ಮ ದುರ್ಲಭವಾದುದೆ ಸರಿ. ನಮ್ಮ ಪ್ರತಿದಿನದ ಬದುಕು ಸಂಗ್ರಾಮವಿದ್ದಂತೆ ನಾವು ಬಂದಿದ್ದು ಇದನ್ನು ಜಯಿಸಲೋ ಬೆನ್ನು ಹಾಕಿ ಓಡಲೋ, "ಇಲ್ಲಿ ಸಲ್ಲದವರು ಅಲ್ಲೂ ಸಲ್ಲರಯ್ಯಾ" ಎಂಬ ಮಾತನ್ನು ಕೇಳಿಲ್ಲವೆ? ಸಾಯುವುದೇನು ಹೇಡಿತನದ ಕೆಲಸವಲ್ಲ. ಅದರಷ್ಟು ಸಾಹಸಮಯದ ಕೆಲಸ ಇನ್ನೊಂದಿಲ್ಲ. ಸಾಯುವುದೇನು ಸಾಮಾನ್ಯವೆ? ನಾವು ಆತ್ಮಹತ್ಯೆ ಮಾಡಿಕೊಳ್ಳುತ್ತೇವೆ, ಸಾಯುತ್ತೇವೆ, ತಿರುಗಿ ಇನ್ನೆಂದು ಬರಲಾರೆವು. ನಮ್ಮವರೊಂದಿಗೆ ಮಾತಾಡಲಾರೆವು, "ಕೋಟಿ ರೂಪಾಯಿ ಕೊಡುತ್ತೇನೆ ನಿನ್ನ ಜೀವ ಕೊಡು" ಎಂದರೆ, ಅನಾಯಾಸವಾಗಿ ಯಾರಾದರೂ ಕೊಟ್ಟಾರೆ? ಅಂಥ ಬಹುಮುಮೂಲ್ಯವಾದ ಜೀವವನ್ನು ಕ್ಷಣಿಕ ಸಿಟ್ಟು ಆವೇಶಕ್ಕೆ ಸಿಲುಕಿ ಕಳೆದುಕೊಳ್ಳಬೇಕೆ? ನಮ್ಮನ್ನು ನಂಬಿಕೊಂಡಿರುವ ನಮ್ಮವರ ಗತಿಯೇನು. ನಮ್ಮ ಮನಸ್ಸಿನ ಶಾಂತಿಗಾಗಿ ಸಾಯುವಷ್ಟು ಸ್ವಾರ್ಥಿಗಳು ನಾವಾಗಬಾರದಲ್ಲವೆ? ಎಲ್ಲವನ್ನು ಕಳೆದುಕೊಂಡೂ, ನೋವು ಅನುಭವಿಸಿಯೂ ನಮ್ಮ ನಡುವೆ ಬದುಕುತ್ತಿರುವ ಅನೇಕ ಧೀಮಂತ ಮಹಿಳೆಯರು ಇದ್ದಾರೆ. ಬದುಕುವ ಛಲವಿದ್ದರೆ ದಾರಿಗಳು ಹಲವು. ಮನಸ್ಸಿದ್ದರೆ ಮಾರ್ಗ ಹೌದಲ್ಲವೆ?

ಹಸೀನಾ ಗ. ಗುಡಿ

# ಗ್ರಾಮೀಣ ಮಹಿಳೆಯರು

ಸ್ತ್ರೀಯರಲ್ಲಿ ಅತಿ ಹೆಚ್ಚಾಗಿ ಕಷ್ಟಗಳನ್ನು ಅನುಭವಿಸುವುದೆಂದರೆ ಗ್ರಾಮೀಣ ಪ್ರದೇಶದವರು. ಅವರಿಗೆ ಬಿಸಿಲು ಬೇಗೆ ಕಷ್ಟ-ನಷ್ಟ ಇವುಗಳೆಲ್ಲ ಲೆಕ್ಕವೇ ಇಲ್ಲ. ಕಾರಣ ಅವರು ತಮ್ಮ ಪತಿಯ ಸುಖಕ್ಕಾಗಿ ಹಾಗೂ ಮಕ್ಕಳ ಸುಖಕ್ಕಾಗಿ ತನ್ನ ಪ್ರಾಣ ಬೇಕಾದರೂ ಒತ್ತೆಯಾಗಿಟ್ಟು ದುಡಿಯುತ್ತಾರೆ. ಕೆಲವು ಸ್ತ್ರೀಯರೊ. ಪಾಪ! ಅವರ ಜೀವನದ ಕಥೆಯನ್ನು ಕೇಳಿದರೆ ಸ್ತ್ರೀ ರೂಪ ತಾಳಿ ಹುಟ್ಟಬಾರದೆನ್ನಿಸುತ್ತದೆ.

ಹೆಣ್ಣನ್ನು ಭೂತಾಯಿಗೆ ಮಾತ್ರ ಹೋಲಿಸಿಲ್ಲ. ಅವಳನ್ನು ತಾಯಿ ಎನ್ನುತ್ತಾರೆ. ಮುಖ್ಯವಾಗಿ ಹೇಳಬೇಕೆಂದರೆ ದೇವರೆಂದು ಕರೆಯುತ್ತಾರೆ. ಇವೆಲ್ಲಾ ನಿಜವೆ? ಜನರು ಈ ನುಡಿಗಳಂತೆ ಹೆಣ್ಣನ್ನು ನೋಡುತ್ತಾರೆಯೆ? ಇಲ್ಲ. ಇದೆಲ್ಲಾ ಬರೀ ಸುಳ್ಳು, ದಬ್ಬಾಳಿಕೆಯ ಮಾತುಗಳು ಈಗಿನ ಕಾಲದಲ್ಲಿ ನುಡಿದಂತೆ ನಡೆಯುವವರು ಯಾರೂ ಇಲ್ಲ. ಜೀವ ಕೊಟ್ಟ ತಾಯಿಯನ್ನೇ ಕಾಲಿನಿಂದ ಜಾಡಿಸುವ ಜನರನ್ನು ನಮ್ಮಲ್ಲಿ ಕಾಣಬಹುದು. ಪತಿಯೇ ಸರ್ವಸ್ವವೆಂದು ನಂಬಿರುವ ಪತ್ನಿಯನ್ನು ನರಕಕ್ಕಿಂತ ಹೆಚ್ಚಾಗಿ ಹಿಂಸಿಸುವ ಜನರಿದ್ದಾರೆ.

ನಿಜವಾಗಿ ಹೇಳಬೇಕೆಂದರೆ ಹಳ್ಳಿಗಳಲ್ಲಿ ಹೆಣ್ಣುಗಳ ಜೀವನ ತುಂಬಾ ದುಃಖಮಯವಾಗಿರುತ್ತದೆ. ಅವರಿಗೆ ಸಮಾಜದಲ್ಲಿ ಹೇಗೆ ಬಾಳಬೇಕೆಂಬ ಪ್ರಜ್ಞೆ ಇರುವುದಿಲ್ಲ. ವಿದ್ಯಾಭ್ಯಾಸವಂತೂ ನೂರಕ್ಕೆ ಹತ್ತು ಭಾಗ ಮಾತ್ರ ತಿಳಿದಿರುತ್ತಾರೆ. ಅವರಿಗೆ ಕಾನೂನು ಕ್ರಮಗಳ ರೀತಿ ನೀತಿಯೇ ತಿಳಿದಿರುವುದಿಲ್ಲ. ಯಾರೇನೇ ಹೇಳಿದರು ತಮ್ಮ ಪಾಡಿಗೆ ತಾವು ದುಡಿಯುತ್ತಿರುತ್ತಾರೆ.

ಹೊರಗಡೆ ದಿನವೆಲ್ಲ ದುಡಿದು ಸಂಜೆ ಮನೆಗೆ ಬಂದರೆ ಊಟಕ್ಕೆ ತೊಂದರೆ. ದೀಪ ಹಚ್ಚಲೂ ಸಹ ಸೀಮೆ ಎಣ್ಣೆಗೆ ಕಷ್ಟ. ಬಂದ 10 ರೂಪಾಯಿ ಗಂಡನ ಕುಡಿತಕ್ಕೆ ಸಾಲದು ಹೆಂಡತಿ ದುಡಿದುಕೊಟ್ಟರೂ ಮತ್ತೆ ಅವಳಿಗೇ ಹಿಂಸೆ, ಚುಚ್ಚು ನುಡಿಗಳು ಅವರ ತಂದೆ-ತಾಯಿಗಳನ್ನು ನಿಂದಿಸುವುದು, ಅವಳಿಗೆ ಹೊಡೆಯುವುದು. ಇವುಗಳಂತೂ ಹೇಳತೀರದು. ಗಂಡಸರಿಗೆ ಊಟವಿಲ್ಲದಿದ್ದರೂ ಕುಡಿಯಲಿಕ್ಕೆ ಹಣ ಬೇಕು. ಹಣವಿಲ್ಲದಿದ್ದರೆ, ಮಾಂಗಲ್ಯವನ್ನು ಮಾರಿ ಕುಡಿಯುವವರಿದ್ದಾರೆ

ಸರ್ಕಾರ ಹೆಣ್ಣನ್ನು ಹಿಂಸಿಸಬಾರದು. ವರದಕ್ಷಿಣೆಯನ್ನು ತೆಗೆದುಕೊಳ್ಳಬಾರದೆಂದು ಹಲವಾರು ಕಾನೂನುಗಳನ್ನು ಜಾರಿಗೆ ತಂದಿದೆ, ಆದರೆ ಇದೆಲ್ಲಾ ಬರೀ ಪುಸ್ತಕದಲ್ಲಿ ಬರೆದಿರುವುದಷ್ಟೆ ಈ ಕಾನೂನುಗಳನ್ನು ಯಾರೂ ಪಾಲಿಸುವುದಿಲ್ಲ. ಮುಖ್ಯವಾಗಿ ಹೇಳಬೇಕೆಂದರೆ ಈ ಕಾನೂನುಗಳನ್ನು ಯಾರು ಜಾರಿಗೆ ತಂದಿದ್ದಾರೋ ಅವರೆ ಹೆಚ್ಚಾಗಿ ತಾಳಿ ಕಟ್ಟಲು ಕೂಲಿಯನ್ನು ತೆಗೆದುಕೊಳ್ಳುತ್ತಾರೆ. ಕೇವಲ ಒಂದೇ ಒಂದು ತಾಳಿಯನ್ನು ಕಟ್ಟಲು ಲಕ್ಷಗಟ್ಟಲೆ ಹಣವನ್ನು ಕೇಳುತ್ತಾರೆ. ಇಷ್ಟೊಂದು ಹಣ ತೆಗೆದುಕೊಂಡರೂ ಹೆಣ್ಣಿಗೆ ಸುಖವಿಲ್ಲ. ಅವನಿಗೆ ಜೀವಿಸಲೂ ವಸತಿಯೂ ಸಹ ಇರುವುದಿಲ್ಲ. ತೆಗೆದುಕೊಂಡ ಹಣ ಮುಗಿಯುವ ತನಕ ಸುಮ್ಮನಿದ್ದು ಹಣ ಮುಗಿದ ಮೇಲೆ ಮತ್ತೆ ಹಿಂಸೆ. ಅವಳ ಜೀವನದಲ್ಲಿ ಅವಳಿಗೆ ನೆಮ್ಮದಿಯೇ ಇಲ್ಲ ತನ್ನ ಜೀವನದಲ್ಲಿ ನೂರಾರು ಆಸೆಗಳನ್ನು ಹೊತ್ತು ಬಂದ ಅವಳಿಗೆ ಅವೆಲ್ಲಾ ಬರೀ ಕನಸಾಗಿಯೇ ಉಳಿಯುತ್ತದೆ. ಎಷ್ಟೇ ಕಷ್ಟ ಬಂದರೂ ಅವಳು ಅದನ್ನು ಅದೇ ಸುಖವೆಂದು ಭಾವಿಸುತ್ತಾಳೆ. ತನ್ನ ಪವಿತ್ರತೆಯನ್ನು ಕಾಪಾಡಲು ಬಂದ ನೋವುಗಳನ್ನೆಲ್ಲಾ ಮನದಲ್ಲಿಯೇ ಮೌನವಾಗಿ ಸಹಿಸುತ್ತ ಬಾಳುತ್ತಾಳೆ.

ನನಗೆ ಸುಮಾರು 18 ವರ್ಷ ವಯಸ್ಸಾಗಿರಬಹುದು ಆಗ ನಡೆದ ಕಥೆ:- ಎಂದಿನಂತೆ ಅವನ ಹೆಂಡತಿ ದನ ಕರುಗಳನ್ನು ಹಿಡಿದುಕೊಂಡು ಒಂದು ಬಗಲಿನಲ್ಲಿ ಮಗುವನ್ನೆತ್ತಿಕೊಂಡು ಬೆಳ್ಳಿಗೆಯಿಂದ ಊಟವಿಲ್ಲದೆ ಬಿಸಿಲ ಬೇಗೆಗೆ ನೊಂದು ಬೆಂದು ಸಾಯಂಕಾಲ ಮನೆಗೆ ಬಂದಳು. ಬಂದ ತಕ್ಷಣ ದಣಿವಾರಿಸಿಕೊಳ್ಳಲು ಪಾಪ ಸ್ವಲ್ಪ ಹೊತ್ತು ಕೂತಿರಬಹುದು ಆಗಲೆ ಅವಳ ಗಂಡ ಬಂದ ಬಂದವನೆ ಕುಡಿಯಲಿಕ್ಕೆ ಹಣವನ್ನು ಕೇಳಿದ ಪಾಪ ಅವಳೆ ಊಟ ನೀರಿಲ್ಲದೆ ದಣಿವಾಗಿ ಬಂದಿದ್ದರಿಂದ ಗಂಡನ ಬಲತ್ಕಾರ ನೋಡಿ ಮೌನವಾಗಿ ಮಾತಾಡದೆ ಕಣ್ಣೀರಿಡುತ್ತಾ ಕುಳಿತಿದ್ದಳು. ಇವನಿಗೆ ಇದನ್ನ ನೋಡಲಾಗಲಿಲ್ಲ. ಕುಡಿಯಲಿಕ್ಕೆ ಹಣ ಕೇಳಿದರೆ ಅಳುತ್ತಾಳೆಂದು ಪಕ್ಕದಲ್ಲಿದ್ದ ದೊಣ್ಣೆಯಿಂದ ಕಾಡು ಪ್ರಾಣಿಗೆ ಹೊಡೆದಂತೆ ಹೊಡೆದು ಬಿಟ್ಟ ಪಾಪ! ಆ ತಾಯಿ ಕಿರುಚಿಕೊಂಡು ಅತ್ತರೂ ಅವಳಿಗೆ ಸಹಾಯ ಮಾಡಲು ಯಾರೂ ಬರಲಿಲ್ಲ. ಪ್ರತಿಯೊಬ್ಬರೂ ನಿಂತು ನೋಡುತ್ತಾರೆಯೆ ವಿನಃ ಯಾರೂ ಸಹಾಯ ಮಾಡಲಿಲ್ಲ. ಅವಳು ಮಕ್ಕಳನ್ನು ಕಂಕುಳಲ್ಲಿ ಹಿಡಿದುಕೊಂಡು ಗೋಳಾಡ ತೊಡಗಿದಳು. ಅವನಿಗೆ ಜನರೂ ಸ್ವಲ್ಪ ಭಯಪಡುತ್ತಿದ್ದರು. ಕಾರಣ ಅವನೊಬ್ಬ ದೊಡ್ಡ ಕುಡುಕ ಈ ವಿಷಯಗಳೆಲ್ಲ ಪೋಲಿಸ್ ಅಧಿಕಾರಿಗಳಿಗೆ ತಿಳಿದರೂ ಅವನು ಏನೂ ಮಾಡಲಿಲ್ಲ. ಸರ್ಕಾರ ಇಂತಹ ಕುಡುಕ, ಕೊಲೆಗಡುಕರನ್ನು ಹಿಡಿದು ಶಿಕ್ಷಿಸಬೇಕು. ಅಧಿಕಾರಿಗಳು ಗ್ರಾಮೀಣ ಪ್ರದೇಶದಲ್ಲಿ ಇಂತಹ ಕೃತ್ಯಗಳು ನಡೆಯುವುದಿಲ್ಲವೆಂದು ತಿಳಿದಿರಬಹುದು. ಆದರೆ ಇವು ನಡೆಯುವುದು ಹಳ್ಳಿಗಳಲ್ಲೇ ಹೆಚ್ಚು.

ಜಿ. ಅನ್ವರ್ ಸಾಬ್.

# ಕನ್ನಡ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ

ಲೇ: ಸುಧಾರ್ಥಿ.
ಪ್ರ: ಪ್ರತಿಭಾ ಕಲಾ ಪರಿಷತ್ ಬೆಂಗಳೂರು (1973)

ಅನೇಕ ಶತಮಾನಗಳ ಪರಂಪರೆಯನ್ನು ಪಡೆದಿರುವ ಕನ್ನಡ ಸಾಹಿತ್ಯವು, ನೂರಾರು ಸಾರಸ್ವತರ ಸತತ ಸೇವೆಗಳ ಫಲವಾಗಿ ಇಂದು ಸಂಪದ್ಭರಿತವಾಗಿ ಕಂಗೊಳಿಸುತ್ತಿದೆ. ಕನ್ನಡ ಸಾಹಿತ್ಯ ಲೋಕದ ಇಂದಿನ ಔನ್ನತ್ಯದಲ್ಲಿ ಮಹನೀಯರ ಮಹತ್ಸಾಧನೆಯೊಂದಿಗೆ ಮಹಿಳೆಯರ ಕೊಡುಗೆಯೂ ಸೇರಿದೆ ಎಂಬುದರಲ್ಲಿ ಸಂಶಯವಿಲ್ಲ.

ತಮ್ಮ ವೈಯುಕ್ತಿಕ ಕೊಡುಗೆಯನ್ನು ನೀಡಿ ಕನ್ನಡ ಸಾಹಿತ್ಯ ಲೋಕವನ್ನು ಸಮೃದ್ಧಿಗೊಳಿಸಿ ಪ್ರಖ್ಯಾತರಾದ ಮಹಿಳೆಯರಲ್ಲಿ ದಿ. ತ್ರಿವೇಣಿಯವರು ಒಬ್ಬರಾಗಿದ್ದಾರೆ.

"ತ್ರಿವೇಣಿ ಕೃತಿಗಳ ಒಳನೋಟ" ಪೂರಕವಾಗಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಮಹಿಳೆಯರಿಂದ ಸಂದಿರುವ ಕೊಡುಗೆಯನ್ನು ಸಂಕ್ಷಿಪ್ತವಾಗಿ ಸಮೀಕ್ಷಿಸುವುದೇ ಈ ಅಧ್ಯಾಯದ ಉದ್ದೇಶ.

೧೯೨೦ರ ಪೂರ್ವದ ಕನ್ನಡ ಸಾಹಿತ್ಯವನ್ನು ವೀಕ್ಷಿಸಿದಾಗ ಗದ್ಯ ಸಾಹಿತ್ಯಕ್ಕಿಂತಲೂ ಪದ್ಯ ಸಾಹಿತ್ಯದ್ದೇ ಮೇಲುಗೈ ಆಗಿರುವುದನ್ನು ಕಾಣಬಹುದು. ಅದರಲ್ಲೂ ಮಹಿಳೆಯರ ಕೊಡುಗೆಯಂತೂ ಬಹುಪಾಲು 'ಕಾವ್ಯ' ಕ್ಷೇತ್ರಕ್ಕೆ ಸೀಮಿತವಾಗಿತ್ತು.

ಈಗ ಉಪಲಬ್ಧವಿರುವ ಆಧಾರಗಳಲ್ಲಿ ನೋಡಿದಾಗ ಕಂತಿಯನ್ನು ಕನ್ನಡದ ಪ್ರಪ್ರಥಮ ಕವಯಿತ್ರಿ ಎಂದು ಪರಿಗಣಿಸಬಹುದು. ಕ್ರಿ.ಶ. ೧೧೦೦ರ ಸುಮಾರಿನಲ್ಲಿ ಜೀವಿಸಿದ್ದಳೆಂದು ಊಹಿಸಲ್ಪಟ್ಟಿರುವ ಕಂತಿಯು 'ಅಭಿನವ ಪಂಪ'ನೆಂದು ಪ್ರಚಾರದಲ್ಲಿದ್ದ ನಾಗಚಂದ್ರನ ಸಮಕಾಲೀನಳು. 'ಅಭಿನವ ವಾಗ್ದೇವಿ', 'ಅಧಿಕ ಕವೀಶ್ವರಿ' ಮುಂತಾದುವು ಇವಳ ಬಿರುದುಗಳು. ಅತ್ಯಂತ ಸ್ವಾರಸ್ಯಕರವಾಗಿ ರೂಪುತಳೆದಿರುವ 'ಕಂತಿ ಪಂಪರ ಸಮಸ್ಯೆ' ಇಂದಿಗೂ ಜನಮನವನ್ನು ಸೂರೆಗೊಳ್ಳುವಂತಿದೆ.

'ಅಭಿನವ ಪಂಪ' ನೆಂದು ಹೇಳಿಕೊಂಡಿದ್ದ ನಾಗಚಂದ್ರನೇ ಇವಳಿಂದ ಹೊಗಳಿಸಿಕೊಳ್ಳಬೇಕೆಂದು ಹಂಬಲಿಸಿ ಪ್ರಯತ್ನಿಸಿದನೆಂದಮೇಲೆ, ಈಕೆಯ ಕವಿತಾ ಸಾಮರ್ಥ್ಯ, ಕೀರ್ತಿ, ಪ್ರಖ್ಯಾತಿಗಳು ಅಸಾಧಾರಣವಾದುದೇ ಆಗಿರಬೇಕೆಂದು ಭಾವಿಸಬಹುದು.

ಕಂತಿಯ ನಂತರದ ಕವಯಿತ್ರಿ ಅಕ್ಕಮಹಾದೇವಿ. ಸುಮಾರು ಕ್ರಿ.ಶ. ೧೧೬೦ರಲ್ಲಿ ಜೀವಿಸಿದ್ದ ಈಕೆಯು ಅಸಂಖ್ಯಾತ ವಚನಗಳ ಜೊತೆಗೆ 'ಯೋಗಾಂಗ ತ್ರಿವಿಧಿ ಎಂಬ ಕೃತಿಯನ್ನು ಬರೆದಿರುವುದಾಗಿ ತಿಳಿದುಬರುತ್ತದೆ.

ಇದೇ ಪರಂಪರೆಯಲ್ಲಿ ಮಹಾದೇವಿ, ಗಂಗಮ್ಮ, ಲಕ್ಕಮ್ಮ ಮುಂತಾದ ವಚನಗಾರ್ತಿಯರೂ ವಚನ ಸಾಹಿತ್ಯಕ್ಕೆ ತಮ್ಮ ಅಮೂಲ್ಯ ಕೊಡುಗೆಯನ್ನು ನೀಡಿದ್ದಾರೆ.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಕಂಪಣನ ರಾಣಿಯಾದ ಗಂಗಾಂಬಿಕೆಯು 'ಮಧುರಾ ವಿಜಯ' ಅಥವಾ 'ವೀರ ಕಂಪಣರಾಯ ಚರಿತೆ' ಯನ್ನು ಬರೆದು ಪ್ರಸಿದ್ಧಳಾಗಿದ್ದಾಳೆ. ಆದರೆ, ಆಕೆಯ 'ಮಧುರಾ ವಿಜಯ'ವು ಸಂಸ್ಕೃತ ಕಾವ್ಯವಾದುದರಿಂದ ಕವಯಿತ್ರಿಯು ಕನ್ನಡದವಳಾದಳೇ ವಿನಃ ಕನ್ನಡ ಸಾಹಿತ್ಯಕ್ಕೆ ಅವಳ ಕೊಡುಗೆಯೇನೆಂಬುದು ಸ್ಪಷ್ಟವಾಗುವುದಿಲ್ಲ.

ಇದೇ ಸಾಮ್ರಾಜ್ಯದ ಪರಂಪರೆಯಲ್ಲಿ ಬರುವ ಅಚ್ಯುತರಾಯನ ಹಿರಿಯರಾಣಿ ತಿರುಮಲಾಂಬೆಯು ರಚಿಸಿರುವ 'ವರದಾಂಬಿಕಾ ಪರಿಣಯ' ವು ಉತ್ತಮ ಸಾಹಿತ್ಯ ಕೃತಿ ಎಂದು ಹೆಸರು ಪಡೆದಿದೆ. ಅಚ್ಯುತರಾಯನ ಎರಡನೆಯ ವಿವಾಹದ ಪ್ರಕರಣವೇ ಇದರ ಕಥಾ ವಸ್ತು. ಕಥಾ ನಾಯಕಿಯು ಕೃತಿಕರ್ತೃವಿನ ಸವತಿಯಾಗಿದ್ದರೂ ಸಹ, ಕೃತಿಯಲ್ಲಿ ಸವತಿ ಮಾತ್ಸರ್ಯದ ಸೋಂಕು ಕಾಣಬರದೆಂಬ ಕೀರ್ತಿಗೆ ಈ ಕೃತಿಯು ಪಾತ್ರವಾಗಿದೆ.

ಕೃಷ್ಣದೇವರಾಯನ ಮಗಳು ಮಧುರವಾಣಿ ಅಥವಾ ಮೋಹನಾಂಗಿ ಎಂಬುವವಳು 'ಮಾರೀಚ ಪರಿಣಯ' ಎಂಬ ಕೃತಿಯನ್ನು ಬರೆದಿರುವಂತೆ ತಿಳಿದು ಬರುತ್ತದೆ.

ಕನ್ನಡ ಸಾಹಿತ್ಯವನ್ನು ಸಾಕಿ, ಸಲಹಿ, ಪೋಷಿಸಿದ ರಾಜಮನೆತಗಳ ಪೈಕಿ, ಒಡೆಯರ ಪರಂಪರೆಯೂ ಸಹ ಪ್ರಮುಖವಾದುದಾಗಿದೆ. ಚಿಕ್ಕ ದೇವರಾಜ ಒಡೆಯರ ಕಾಲದ ಪ್ರಸಿದ್ಧ ಕವಯಿತ್ರಿ 'ಸಂಚಿಯ ಹೊನ್ನಮ್ಮ' ನೇ ಇದಕ್ಕೆ ಸಾಕ್ಷಿಯಾಗಿದ್ದಾಳೆ. 'ಸರಸ ಸಾಹಿತ್ಯದ ವರದೇವತೆ' ಎಂದು ಬಿರುದು ಪಡೆದಿದ್ದ ಹೊನ್ನಮ್ಮನು ಚಿಕ್ಕದೇವರಾಜ ಒಡೆಯರ ಅರಮನೆಯಲ್ಲಿ ಸಂಚಿಯ ಕಾರ್ಯವನ್ನು ನಿರ್ವಹಿಸುವ ಊಳಿಗದವಳು. ಉಭಯ ವೇದಾಂತಾಚಾರ್ಯರೆಂದು ಹೆಸರಾಗಿದ್ದ ಅಳಸಿಂಗರಾರ್ಯರೆಂಬುವವರು ಈಕೆಯ ಗುರುಗಳು. ಅಸಾಧ್ಯ ಪಾಂಡಿತ್ಯವಿದ್ದ ಅಳಸಿಂಗರಾರ್ಯರೇ ಹೊನ್ನಮ್ಮನಲ್ಲಿ ಸುಪ್ತವಾಗಿದ್ದ ಕವಿತಾಶಕ್ತಿಯನ್ನು ಪ್ರಶಂಸಿಸಿದ ಕಾರಣ, ಅರಸನ ಅಪ್ಪಣೆಯ ಮೇರೆಗೆ ಅರಸಿ ದೇವಾಜಮ್ಮಣ್ಣಿಯವರು ಹೊನ್ನಮ್ಮನಿಂದ ಕವಿತಾ ರಚನೆ ಮಾಡಿಸಿದರೆಂಬುದು ಪ್ರತೀತಿ.

# 'ನಾನೇಕೆ ಸ್ತ್ರೀವಾದಿ?'

ಮಾನಸಿಕ ಪ್ರಬುದ್ಧತೆ, ಸ್ವಂತಿಕೆಯನ್ನು ಬೆಳೆಸಿಕೊಂಡಿರುವ ಸ್ತ್ರೀಯ ಹಕ್ಕು ಬಹಳ ಸಹಜವಾಗಿಯೇ ದೊರೆತಿದುದೆಂದು ಭಾವಿಸುವ ಉನ್ನತ ವಿದ್ಯಾವಂತೆಯರನ್ನು, ಉದ್ಯೋಗ ರಂಗದಲ್ಲಿಯೂ ಸಫಲರಾಗಿರುವ ಸ್ತ್ರೀಯರನ್ನು ಬಹಳ ವರ್ಷಗಳಿಂದ ನಾನು ಆಗಾಗ್ಗೆ ಭೇಟಿಯಾಗುತ್ತಲೇ ಇರುತ್ತೇನೆ. ಇವರು ವೈಯಕ್ತಿಕ ಜೀವನದಲ್ಲಿ ತಾಯಿಯ ಹಾಗೂ ಪತ್ನಿಯ ಪಾತ್ರಗಳನ್ನು ಖುಷಿಯಿಂದಲೇ ನಿರ್ವಹಿಸುತ್ತಾರೆ, ಆದರೆ ಇವರೆಲ್ಲ ಖಡಾ ತುಂಡವಾಗಿ "ನಾನು ಒಬ್ಬ ಸ್ತ್ರೀ ವಾದಿ ಅಲ್ಲ" ಎಂದು ಪ್ರತಿಪಾದಿಸುತ್ತಾರೆ. ಇಂತಹ ಸ್ತ್ರೀಯರೇ ತಾವು ಕೆಲಸ ಮಾಡುವ ಕಡೆಗಳಲ್ಲಿ ಹಾಗೂ ತಮ್ಮ ತಮ್ಮ ಮನೆಗಳಲ್ಲಿ ಬೇಡಿಕೆಯನ್ನಿತ್ತು ಸಮಾನತೆ ಹಾಗೂ ಘನತೆಗಳನ್ನು ಪಡೆದುಕೊಂಡಿರುತ್ತಾರೆ. ಆತ್ಮ ವಿಶ್ವಾಸದೊಂದಿಗೆ ವ್ಯಕ್ತಿತ್ವ, ಸ್ಥೈರ್ಯವನ್ನು ಗಳಿಸಿದ ಇವರು ತಾವು ಸ್ತ್ರೀಯರೆಂಬ ಕಾರಣಕ್ಕಾಗಿಯೇ ಪುರುಷರಿಗಿಂತ ಕೀಳು ಎಂಬ ಮಾತನ್ನು ಹಾಸ್ಯಾಸ್ಪದವಾಗಿ ಪರಿಗಣಿಸುತ್ತಾರೆ. ಆದಾಗ್ಯೂ ತಾವು ಮಾತ್ರ ಸ್ತ್ರೀ ವಾದಿಗಳಲ್ಲವೆಂಬುದೇ ಇವರ ವಾದ. ಈ ಸ್ತ್ರೀಯರು ತಮಗೆ ಹೆಣ್ಣು ಮಕ್ಕಳಾದಾಗ ಕಣ್ಣೀರಿಟ್ಟವರಲ್ಲ, ಬೇಡಿಕೆ, ಸ್ತ್ರೀಯರನ್ನು ಹೀಗಳುವ ಅಶ್ಲೀಲ ಹಾಸ್ಯಗಳನ್ನು ಸಹಿಸಿದವರಲ್ಲ, ಕನಸಿನಲ್ಲಿಯೂ ಸಹ ಯಾರದೋ ಹೆಂಡತಿ, ಮಗಳು ಅಥವಾ ತಾಯಿಯಾಗಿ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಇಚ್ಛೆ ಪಟ್ಟವರಲ್ಲ. ವಿಶ್ವದಾದ್ಯಂತ ಸ್ತ್ರೀ ವಾದಿಗಳು ನಡೆಸಿದ, ಪ್ರತಿನಿತ್ಯ ನಡೆಸುತ್ತಿರುವ ಹೋರಾಟಗಳಿಂದಾಗಿಯೇ ನೆಲೆಸಿರುವ ಅವಕಾಶಗಳನ್ನು, ಸ್ವಾತಂತ್ರ್ಯದ ಸವಲತ್ತುಗಳನ್ನು ಸಹಜವಾಗಿಯೇ ಇರುವವು ಎಂಬಂತೆ ಭಾವಿಸಿ ಅನುಭವಿಸುವ ಇವರು ತಾವು "ಸ್ತ್ರೀ ವಾದಿ"ಗಳು ಮಾತ್ರ ಅಲ್ಲವೆನ್ನುತ್ತಾರೆ. ಹಾಗಿದ್ದರೆ ಸ್ತ್ರೀ ವಾದಿ ಎಂದರೆ ಯಾರು? ಯಾವ ಕಾರಣಕ್ಕಾಗಿ ಈ ಮಹಿಳೆಯರು ಸ್ತ್ರೀ ವಾದಕ್ಕೆ ತಮಗೆ ಸಂಬಂಧವಿಲ್ಲವೆನ್ನುತ್ತ ತಮ್ಮನ್ನು ಬೇರ್ಪಡಿಸಿಕೊಂಡು ಪ್ರತಿಪಾದಿಸಬೇಳಸುತ್ತಾರೆ? ನಿಜವಾಗಿ ಸ್ತ್ರೀ ವಾದ ಎಂದರೆ [illegible] ಅಥವಾ ಅಭಿಪ್ರಾಯ ಎಂತಹುದು? ಯಾವ ಮೂಲದಿಂದ ಈ ತಪ್ಪು ನಂಬಿಕೆಯನ್ನು [illegible] ಪಡೆದರು?

ಇಂತಹ ಹಲವಾರು ಮಂದಿ ಮಹಿಳೆಯರೊಂದಿಗೆ ಬೆರೆತು ಮಾತನಾಡಿ "ಸ್ತ್ರೀ ವಾದ"ದ ಬಗೆಗಿನ ಅವರ ಉತ್ಪ್ರೇಕ್ಷಿತವಾದ ಪ್ರತಿಕ್ರಿಯೆಗಳನ್ನು ಅರ್ಥ ಮಾಡಿಕೊಳ್ಳುವ ಹಂತದಲ್ಲಿ ನಾನು ಈ ರೀತಿಯ ಕೆಲವು ನಿರ್ಧಾರಗಳನ್ನು ತಲುಪಿದ್ದೇನೆ.

ಈ ಸ್ತ್ರೀಯರಲ್ಲಿ ಬಹಳಷ್ಟು ಸ್ತ್ರೀಯರು ಸ್ತ್ರೀ ವಾದಿ ಬರಹಗಾರರನ್ನಾಗಲೀ ಅಥವಾ ಬರಹಗಳನ್ನಾಗಲೀ ಖುದ್ದಾಗಿ ಓದಿಯೇ ಇಲ್ಲ. ಅವರ ಬಗ್ಗೆ ಸ್ವಲ್ಪ ಓದಿಕೊಂಡಿರುತ್ತಾರಷ್ಟೇ, ಹಾಗೆ ಓದಿರುವುದು ಸಹ ಭಾರತ ಹಾಗೂ ಪಾಶ್ಚಾತ್ಯ ರಾಷ್ಟ್ರದಲ್ಲಿ ಪ್ರಚಲಿತವಿರುವ ಮಾಧ್ಯಮಗಳಲ್ಲಿ. ಇಲ್ಲಿಯೂ ಸಹ ಕೆಲವು ಅಪವಾದಗಳನ್ನು ಬಿಟ್ಟರೆ ವಿರೂಪಗೊಳಿಸಲ್ಪಟ್ಟಂತಹ, ರೋಚಕವಾದ ಸ್ತ್ರೀ ವಾದವನ್ನು ಕೆಲವೇ ವೈಭವೀಕೃತ ವಿವರಣೆಯಲ್ಲಿ ಬಿಚ್ಚಿ ತೋರಿಸಿದಂತಹ, ಸ್ತ್ರೀ ವಾದ. ಕೆಲವು ಸಾಂಕೇತಿಕ ರೂಪಗಳನ್ನಂತೂ ಬಹಳ ವಿರೂಪಗೊಳಿಸಿವೆ. ಬ್ರಾ ಸುಟ್ಟಿರುವ, ಸಂತಾನ ವಿರೋಧ, ಲೆಸ್‌ಬಿಯನ್‌ನಂತವು.... ಇತ್ಯಾದಿಗಳನ್ನು ಪ್ರಧಾನವೆಂಬಂತೆ ಮಾಡಿ ಜನರಿಗೆ ಮುಟ್ಟಿಸಿದವು. ಮೇಲ್ಕಂಡಂತವುಗಳು ಜನರಿಗೆ ಕಚಗುಳಿ ಇಡುವಂತಹವು ಎಂಬುದನ್ನು ಮನಗಂಡ ಮಾಧ್ಯಮಗಳು ಬಿಸಿ ಬಿಸಿಯಾಗಿ ಮಾರಾಟವಾಗುತ್ತವೆ. ಎಂಬ ಉದ್ದೇಶದಿಂದಲೇ ಸ್ತ್ರೀ ವಾದದ ಮೌಲ್ಯಗಳನ್ನು ವಿರೂಪಗೊಳಿಸಿದವು. ಸ್ತ್ರೀ ದ್ವೇಷಿಗಳಿಗಿಂತಲೂ ಹೆಚ್ಚಾಗಿ ಸ್ತ್ರೀ ವಾದದ ಬಗ್ಗೆ ತಪ್ಪು ತಿಳುವಳಿಕೆಯನ್ನು ಇವು ಪ್ರಭಾವಯುತವಾಗಿ ಬೀರಿದವು. ಸ್ತ್ರೀ ವಾದಿಗಳು ತಮ್ಮ ಪ್ರತಿಭಟನೆಯ ಹಂತದಲ್ಲಿ ಸಾಂಕೇತಿಕವಾಗಿ ಆಚರಿಸಿದಂತಹ ಕ್ರಿಯೆಗಳನ್ನು, ಸ್ತ್ರೀಯ ಓಟಿನ ಹಕ್ಕಿಗಾಗಿ ದ್ವಾರಗಳಿಗೆ ಸರಪಳಿಯಂತೆ [illegible] ಸಲ್ಲುತ್ತದೆ. ಇತ್ತೀಚಿನ ವಿಶೇಷ [illegible] ಬ್ರಾ ಸುಟ್ಟಿರುವಂತಹವು.... ಇಂತಹ ಪ್ರಾಳ [illegible], ಸಂದರ್ಭಗಳ ಹಿನ್ನೆಲೆ [illegible], ಈ ಕ್ರಿಯೆ ಏನನ್ನು ಪ್ರತಿನಿಧಿಸುತ್ತವೆ [illegible] ಒಂದು [illegible] ಅರ್ಥ ಮಾಡಿಕೊಳ್ಳದೇ [illegible].

[illegible]

ಬ್ಬಾ ಸುಡುವಂತಹ ಸಂಗತಿ ನಡೆದದ್ದು ಹದಿನೈದು ವರ್ಷಗಳ ಹಿಂದೆ ಆದರೆ ಇಂದಿಗೂ ಅದು ಜನರ ಮನಸ್ಸಿನಲ್ಲಿ ಹುಳುವಿನಂತೆ ಅಂಟಿಕೊಂಡಿದೆಯಲ್ಲ. ಅದರ ಆಚೆ ಅಥವಾ ಅನಂತರದ ಹಂತವನ್ನು ನೋಡುವ ಜನತೆಯ ವಿವೇಚನಾ ಶಕ್ತಿಯನ್ನೇ ಈ ಹುಳ ಕೊಂದು ಹಾಕಿದೆಯಲ್ಲ! ಇವರು ಇತರರನ್ನು ನೋವು ಗೊಳಿಸುತ್ತದೆಯೆಂದರೂ ತಮ್ಮ ವಿಶ್ವಾಸ ಬಿಟ್ಟು ಕೊಡದವರು. ತಮ್ಮದೇ ಸರಿ ಎನ್ನುವಂತಹ ನಂಬಿಕೆಯಿಂದ ಸ್ತ್ರೀ ವಾದಿಗಳು ಪ್ರಪಂಚ ಇಬ್ಭಾಗ ಮಾಡುವವರು, ಮಕ್ಕಳನ್ನು ಹೆರಲಾರದವರು ಹಾಗೂ ಪುರುಷರನ್ನು ಜೀವನದ ಎಲ್ಲಾ ಚಟುವಟಿಕೆಗಳಲ್ಲೂ ದೂರವಿಡಬೇಕು ಎನ್ನುವವರು ಎಂದು ನಂಬುತ್ತಾರೆ.

ಆದ್ದರಿಂದಲೇ ಜನ ಮುಖ್ಯವಾಗಿ ಮೇಲೆ ಹೇಳಿದಂತೆ "ನಾನು ಒಬ್ಬ ಸ್ತ್ರೀ ವಾದಿ" ಅಲ್ಲ ಎನ್ನುವಂತಹ ಸ್ತ್ರೀಯರು ಈ ರೀತಿ ಕ್ರೂರವಾದ ಮತ್ತು ಅಪಕ್ವವಾದ ಸಂಕೇತಗಳಿಗಿಂತ ಮೀರಿದ ಗ್ರಹಿಕೆ ಇದೆಯೆಂಬುದನ್ನು ನೋಡಲು ಇಷ್ಟಪಡುವುದಿಲ್ಲ ಎನ್ನುವ ಭಾವನೆ ನನಗೆ ಉಂಟಾಗಿದೆ. ಸ್ತ್ರೀ ವಾದ ಎಂದರೆ ಇದಕ್ಕಿಂತ ಮಿಗಿಲಾದ ತಿಳುವಳಿಕೆ ಇದೆ ಎಂಬುದನ್ನೇ ಅನುಮಾನಿಸುವ ಬುದ್ಧಿವಂತರು ಇವರಾದುದರಿಂದಲೇ ಅವರು ಈ ಸಂಕೇತಗಳಿಗಿಂತ ಇನ್ನೂ ಹೆಚ್ಚಾಗಿ, ಗಹನವಾಗಿ, ತಿಳಿಯಲು ಇಷ್ಟಪಡುವುದಿಲ್ಲ. ಸ್ತ್ರೀ ವಾದ ಎತ್ತುವ ಆಳವಾದ ಹಾಗೂ ಮೂಲಭೂತವಾದ ಪ್ರಶ್ನೆಗಳನ್ನು ಅವರು ಗ್ರಹಿಸಿದ್ದಾರೆ ಎಂದು ನನಗೆನ್ನಿಸುತ್ತದೆ. ಹಾಗಾಗಿ ಅವರಿಗೆ ಹೆದರಿಕೆ. ಯಾವುದೇ ಸಮಸ್ಯೆಗಳಿಗಿಂತ ಹೆಚ್ಚಾಗಿ ಸ್ತ್ರೀ ವಾದ ವೈಯಕ್ತಿಕ ಹಾಗೂ ರಾಜಕೀಯದ ಮಧ್ಯೆ ಏಕತೆ ಮತ್ತು ಸಾಮರಸ್ಯವನ್ನು ಬಯಸುತ್ತದೆ. ಇವರು ಸಹ ತಮ್ಮ ವೈಯುಕ್ತಿಕ ಬದುಕನ್ನೂ ಹಾಗೂ ಸಂಬಂಧಗಳನ್ನು ಪ್ರಶ್ನೆ ಮಾಡಿಕೊಳ್ಳಬೇಕಾಗುತ್ತದೆ, ಅವರು ಅದನ್ನು ಖಂಡಿತವಾಗಿಯೂ ಮಾಡುವುದಿಲ್ಲ,

ಸ್ತ್ರೀ ವಾದಿ ಅಲ್ಲ ಎಂದು ತಮ್ಮನ್ನು ಚಿತ್ರಿಸಿಕೊಳ್ಳುವ ಬಾರತ ದೇಶದ ಸ್ತ್ರೀಯರಿಗೆ ಇರುವ ಸಮಸ್ಯೆಯೆಂದರೆ ಇವರಿಗೆ ಭಾರತದ ಸ್ತ್ರೀ ವಾದದ ಬಗ್ಗೆಯಾಗಲೀ ಅಥವಾ ಮಹಿಳಾ ಚಳುವಳಿಯ ಬಗ್ಗೆಯಾಗಲೀ ಅರಿವಿಲ್ಲ. ನಮ್ಮ ಮಾಧ್ಯಮಗಳು ವರದಕ್ಷಿಣೆ ಸಾವು. ಚುಡಾಯಿಸುವಿಕೆ, ಅತ್ಯಾಚಾರಗಳಂತಹ ವಿಷಯಗಳನ್ನು ವಿರೋಧಿಸಿ ನಡೆಸುವ ಪ್ರತಿಭಟನಾ ಮೆರವಣಿಗೆಗಳನ್ನು ಪ್ರಕಟಿಸಿವೆಯೇ ಹೊರತು ಸ್ತ್ರೀಯರ ಸ್ಥಿತಿ–ಗತಿಯ ಬಗ್ಗೆಗಿನ ವಿವರಣೆಯನ್ನಾಗಲೀ, ಹುಡುಕಾಟದ ಪ್ರಶ್ನೆಗಳನ್ನಾಗಲೀ ಅಲ್ಲ. ಸರ್ವರಿಗೂ ಸಮಾನತೆ ಇರುವಂತ ಸಮಾಜಕ್ಕೆ ಬೇಕಾಗುವ ಮ್ಯಾನಿಫ್ಯಾಸ್ಟೊ ತಯಾರಿಸುವುದಕ್ಕಾಗಲೀ, ಸ್ತ್ರೀ–ಪುರುಷರ ಮೇಲೆ ಹೇರಲ್ಪಟ್ಟಂತಹ ಸಾಂಪ್ರದಾಯಿಕ ಪಾತ್ರ, ನಡತೆಗಳ ಕಟ್ಟುಗಳನ್ನ ಮುರಿಯುವುದಕ್ಕಾಗಲೀ, ನಗರ ಹಾಗೂ ಗ್ರಾಮೀಣ ಪ್ರದೇಶಗಳ ಬಡ ಹೆಂಗಸರ ಗ್ರಹಿಕೆಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವಂತಹ ಯಾವುದೇ ವಿಚಾರಧಾರೆಯನ್ನು ಮಾಧ್ಯಮಗಳು ಪ್ರಕಟಿಸುವುದಿಲ್ಲ. ಹಾಗಾಗಿ ಕೆಲವು ವರ್ಗೀಕರಣಗಳು ಹುಟ್ಟಿಕೊಳ್ಳುತ್ತವೆ. ಯಾವುದೇ ನೆಲೆ ಅಥವಾ ಯಾವುದೇ ಗುಂಪು ಇದೇ ನಿಜವಾದ ಸ್ತ್ರೀ ವಾದ ಎಂದು ಎತ್ತಿ ಹಿಡಿಯುವುದು ಸಾಧ್ಯವಿಲ್ಲ. ಅಥವಾ ಎಲ್ಲರ ಪರವಾಗಿ ಮಾತನಾಡಲು ಸಾಧ್ಯವಿಲ್ಲ.

ಆದಾಗ್ಯೂ ಭಾರತದ ಹಾಗೂ ವಿದೇಶದ ಬಹುತೇಕ ಸ್ತ್ರೀ ವಾದಿಗಳು ಕೆಲವು ಮೂಲಭೂತ ತತ್ವಗಳನ್ನು ಪ್ರತಿಪಾದಿಸಿ ಎತ್ತಿ ಹಿಡಿಯುತ್ತಾರೆ.

ಮಾನವ ಜೀವಿ ಪುರುಷನಿಗಾಗಲೀ ಅಥವಾ ಸ್ತ್ರೀಗಾಗಲೀ ಆರ್ಥಿಕ ಹಾಗೂ ಸಾಮಾಜಿಕ ಬದುಕಿನಲ್ಲಿ ಸಮಾನ ಪಾಲುದಾರರಾಗುವ ಹಕ್ಕು, ಜೈವಿಕ ಲಿಂಗಧಾರಿತ ಪಾತ್ರಗಳು, ನೈಹಿಕತೆಯಿಂದ ನಿರ್ಧರಿತವಾಗಿರುವ ಹಣೆ ಬರಹಗಳನ್ನು ಮೀರಿ ಪ್ರತಿ ಸ್ತ್ರೀ–ಪುರುಷರಿಗೂ ಸ್ವಂತ ನಿರ್ಧಾರ, ಹಾಗೂ ಪ್ರತಿಭೆ, ಶಕ್ತಿ, ಆಕಾಂಕ್ಷೆಗಳನ್ನು ಅರಿತು ಬೆಳೆಸಿಕೊಳ್ಳುವ ಹಕ್ಕು ಗೃಹಕೃತ್ಯ, ಮಕ್ಕಳ ಆರೈಕೆಗಳಲ್ಲಿ ತಂದೆ ತಾಯಿ ಇಬ್ಬರಿಗೂ ಸಮಾನ ಜವಾಬ್ದಾರಿ ಹಾಗು ಈ ತರಹೆಯ ಕೆಲಸ ನಿರ್ವಹಿಸುವ ಹೊಣೆಗಾರಿಕೆ; ಈವರೆಗೂ ಗುರುತಿಸದಿರುವ ಸ್ತ್ರೀಯರ ದುಡಿಮೆಯನ್ನು ಸಾಮಾಜಿಕ ಹಾಗೂ ಆರ್ಥಿಕವಾಗಿ ಹಾಗೂ ಮೌಲ್ಯಧಾರಿತವಾಗಿ ಗುರುತಿಸುವ ಅವಶ್ಯಕತೆ,

ಕೇವಲ ಸ್ತ್ರೀ ಯೆಂಬ ಕಾರಣಕ್ಕಾಗಿಯೇ ಅವರು

25ನೇ ಪುಟ ನೋಡಿ



# ಸಂವೇದನೆ

ಹಾಲಿನ ಸೊಸೈಟಿಯ ಸರ್ವೆ ಮುಗಿಸಿ ನೆಲಮಂಗಲದಲ್ಲಿ ಬಸ್ ಹತ್ತಿದಾಗ ಕತ್ತಲು ಕವಿಯ ತೊಡಗಿತು. ಮನೆ ತಲುಪುವ ತವಕದಿಂದ ಶಟಲ್ ಬಸ್ ಹತ್ತಿದವಳು ಹೊರಡಲನುವಾಗುತ್ತಿದ್ದ ಬಸ್ ಹತ್ತಿ ಕುಳಿತೆ. ಇನ್ನೇನು ಬಸ್ ಹೊರಡುತ್ತಿದೆಯೆನ್ನುವಾಗ ಕಂಕುಳಲ್ಲೊಂದು ಮಗುವನ್ನೆತ್ತಿಕೊಂಡು ಅವಸರದಿಂದ ಬಸ್ ಹತ್ತಿ ನನ್ನ ಪಕ್ಕದಲ್ಲಿ ಖಾಲಿ ಇದ್ದ ಜಾಗ ನೋಡಿ ಕುಳಿತುಕೊಂಡಳು. ಬಾಚದ ತಲೆ, ಕೈಯಲ್ಲಿ ಒಂದು ಪ್ಲಾಸ್ಟಿಕ್ ಚೀಲ, ಚಡ್ಡಿ ಹಾಕಿಕೊಂಡಿರದ 2 ವರ್ಷದ ಎಳೆಯ ಮಗಳು. ಆ ಕಡೆ, ಈ ಕಡೆ ನೋಡುತ್ತಾ, ನನ್ನ ಕಡೆಯೂ ನೋಡಿ, "ಈ ಬಸ್ಸು ಬೆಂಗಳೂರಿಗೆ ಹೋಗುತ್ತಲ್ವೇನಮ್ಮಾ" ಎಂದು ಮುಖ ತಿರುಗಿಸಿದಳು. ಕೆಂಡದಂಥ ಕೆಂಪು ಕಣ್ಣು, ಅತ್ತು ಅತ್ತು ಕಣ್ಣೆಲ್ಲಾ ಊದಿಕೊಂಡಿದ್ದವು. ಕೈಯಲ್ಲಿರುವ ಚಿಲ್ಲರೆ ಕಾಸನ್ನು ನನ್ನ ಮುಂದೆ ಹಿಡಿದು "ಬಸ್ ಛಾರ್ಜು ಎಷ್ಟಾಗುತ್ತೆ ಇದರಲ್ಲಿ ಎಣಿಸಿಕೊಡಮ್ಮಾ" ಎಂದಳು. ನಾನು ಎಣಿಸಿಕೊಟ್ಟೆ. ಕಣ್ಣಲ್ಲಿ ತುಂಬಿದ ನೀರನ್ನು ಮರೆಮಾಚಲು ಆ ಕಡೆ, ಈ ಕಡೆ ತಿರುತಿರುಗಿ ನೋಡುತ್ತಿದ್ದಳು.

ಮನಸ್ಸು ತಡೆಯಲಾರದೆ, "ಯಾಕಮ್ಮ ಅಳ್ತಾ ಇದ್ದೀಯಾ" ಎಂದೆ. ಅವಳು ಉತ್ತರಿಸಲಿಲ್ಲ. ನಾನು ಸುಮ್ಮನಾದೆ. ಸ್ವಲ್ಪ ಹೊತ್ತು ಬಿಟ್ಟು, "ನಿಮಗೆ ಮದುವೆಯಾಗಿದೆಯೇ?" ಎಂದು ಕೇಳಿದಳು. ನನ್ನ ಕೊರಳಲ್ಲಿ ತಾಳಿ ಇಲ್ಲದಿದುದ್ದನ್ನು ನೋಡಿ ಅನುಮಾನ ಬಂದಿರಬೇಕು, "ಹೂಂ" ಎಂದೆ.

"ನೋಡಿ, ನನ್ನ ಗಂಡ ದಿನಾ ಕುಡಿದು ಬಂದು ಹೊಡೆಯೋದು. ಜೊತೆಗೆ ನನ್ನ ಮಾವನದು ಇದೇ ಕೆಲ್ಸ. ನನಗೂ ನೋವು ನುಂಗಿಕೊಂಡು ಸಾಕಾಯಿತು. ಈ ಮಗುಗಾಗಿ ನಾನು ಇಷ್ಟು ವರ್ಷ ತಡೆದುಕೊಂಡೆ. ಆದರೆ ಎಷ್ಟು ಅಂತ ತಡೆದುಕೊಳ್ಳೋದು" ಹೀಗೆ ಬಿಚ್ಚಿಕೊಳ್ಳತೊಡಗಿದಳು. ತಂದೆ ತಾಯಿ ಸ್ವಂತದಲ್ಲಿಯೇ ಮದುವೆ ಮಾಡಿದ್ದು. ಗಂಡ ಡ್ರೈವರ್ ಕೆಲಸಮಾಡುತ್ತಿದ್ದರೂ, ಮನೆಗೆ ಏನೂ ತರದೆ ಉಪವಾಸ ಸಾಯಿಸುತ್ತಿದ್ದುದು, ಯಾರೋ ಇನ್ನೊಬ್ಬ ಹೆಂಗಸನ್ನು ಮಡಗಿಕೊಂಡಿದ್ದು. ಸ್ವಂತ ಒಡಹುಟ್ಟಿದ ಅಕ್ಕ ಅಲ್ಲಿಯೇ ಇದ್ದರೂ ಅವಳ ಮನೆಗೆ ಹೋಗಲು ಅಡ್ಡಿಮಾಡುವುದು ಹೀಗೆ ಹೇಳುತ್ತಿದ್ದಂತೆ ಮಗು ಗಕ್ಕನೆ ವಾಂತಿ ಮಾಡತೊಡಗಿತು. ಮಗು ಕಕ್ಕಿದ್ದನ್ನು ಒರೆಸಲೂ ಅವಳಲ್ಲಿ ಬಟ್ಟೆ ಏನೂ ಇರಲಿಲ್ಲ. ನನ್ನ ಬ್ಯಾಗನ್ನು ತಡಕಾಡಿ ಕರ್ಚೀಫ್ ತೆಗೆದುಕೊಟ್ಟೆ. ಹಿಂಜರಿಯುತ್ತಲೇ ತೆಗೆದುಕೊಂಡಳು. ಮಗುವಿನ ಬಾಯಿ ಒರೆಸುತ್ತಿದ್ದ ಹಾಗಯೇ, ಅವಳೂ ವಾಂತಿ ಮಾಡತೊಡಗಿದಳು. ಸ್ವಲ್ಪ ಸುಧಾರಿಸಿಕೊಂಡ ನಂತರ ಬೆಳಿಗ್ಗೆಯಿಂದಾ ಏನೂ ತಿಂದಿರಲಿಲ್ಲ, ಹೊಟ್ಟೆಯೆಲ್ಲಾ ತೊಳೆಸಿದಂತಾಗುತ್ತಿದೆಯೆಂದಳು. ಮಗು ಚಳಿಯಿಂದ ಥರ ಥರಾ ನಡುಗುತ್ತಿತ್ತು.

"ಬೆಂಗಳೂರಲ್ಲಿ ಯಾರ ಮನೆಗೆ ಹೋಗುತ್ತಿ? ಯಾರಾದರೂ ಸಂಬಂಧಿಕರಿದ್ದಾರಾ?" ಎಂದೆ. "ಇದ್ದಾರೆ, ಆದರೆ ನಾನು ಯಾರ ಮನೆಗೂ ಹೋಗಲ್ಲ. ರೈಲಿಗೆ ತಲೆ ಕೊಟ್ಟು ನಾನು ನನ್ನ ಮಗು ಇಬ್ಬರೂ ಸಾಯ್ತೀವಿ" ಅಂದ್ಲು.

ನನಗೆ ತಕ್ಷಣ ಟಾಲ್‌ಸ್ಟಾಯ್‌ನ ಅನ್ನು ನೆನಪಾದಳು. ಭೂತಾಕಾರದ ಚಕ್ರಗಳು, ಅವುಗಳಡಿ ಚಿಂದಿಯಾಗುವ ದೇಹ....ನೆನಪಿಸಿಕೊಂಡು ಮೈ ಜುಂ ಎಂದಿತು. ಅವಳು ಏನೋ ಹೇಳ್ತಾ ಇದ್ಲು.... ಒಂದೆರಡು ಮಾತು ಕೇಳಿಸ್ಲಿಲ್ಲಾ. ಯಾಕೆ ಬದುಕಬೇಕು ಹೇಳಿ? ನನ್ನ ಕಷ್ಟ ಯಾರ ಹತ್ತಿರ ಹೇಳಿಕೊಳ್ಳಲಿ. ಎಲ್ಲರೂ ಇದ್ರೂ ನನಗೆ ಯಾರೂ ಇಲ್ಲ ಎಂದು

ಸುಮ್ಮನಾದಳು. ಬಸ್ ನಿಂತಾಗಲೆಲ್ಲಾ ಇದು ಸಿಟಿ ಮಾರ್ಕೆಟಾ ಎಂದು ಕೇಳುತ್ತಿದ್ದಳು. ಬೆಂಗಳೂರಿಗೆ ಗಂಡನ ಜೊತೆಯಲ್ಲಿ ಒಂದೆರಡು ಸಾರಿ ಬಂದಿದ್ದೆನೆಂದಳು. ಸಿಟಿಮಾರ್ಕೆಟ್ ಹತ್ತಿರ ಬರುತ್ತಿದ್ದಂತೆ ಅವಳ ಸಮಸ್ಯೆಗಿಂತ ನನ್ನ ಸಮಸ್ಯೆ ಭೂತಾಕಾರವಾಯಿತು. ಇವಳಿಗೆ ದಾರಿ ತೋರುವ ಶಕ್ತಿ ನನಗಿದೆಯೇ? ಅಥವಾ ನಮಗಿದೆಯೇ? ಇಷ್ಟು ಹೊತ್ತಿಗೆ ಮನೆ ಬಿಟ್ಟು ಬಂದಿದ್ದೀಯಾ? ಬೆಂಗಳೂರು ಸರಿಯಾಗಿ ಗೊತ್ತಿಲ್ಲ ಅಂತ ಹೇಳ್ತೀಯಾ. ನೀನು ಸತ್ತರೆ ಸಮಸ್ಯೆ ಬಗೆಹರಿಯುತ್ತಾ? ನಿನಗಾಗಿ ನೀನು ಬದುಕಬೇಕು? ಈ ಮಗುವಿಗಾದರೂ ನೀನು ಬದುಕಬೇಕು ಅಂತ ಹೇಳಬೇಕು ಅಂದುಕೊಂಡರೂ ಆ ಕ್ಷಣದಲ್ಲಿ ಹೇಳಲಾಗಲಿಲ್ಲ. ಇಂಥ ಒಂದು ಶೋಚನೀಯ ಸಂದರ್ಭದಲ್ಲಿ ಹೆಂಗಸರಿಗೆ ತಲೆಯ ಮೇಲೊಂದು "ಸೂರು" ಇಲ್ಲದಿರುವುದರಿಂದ ಸಾಯುವುದೇ ಸುಲಭದ ದಾರಿ ಎಂದೆಣಿಸುತ್ತಾರೆ ಹೆಂಗಸರು.

ಸಿಟಿ ಮಾರ್ಕೆಟ್ ತಲುಪಿದಾಗ ಇಲ್ಲಿ ಇಳಿಯಬೇಕು ಅಂದೆ. ಎಲ್ಲರೂ ಇಳಿಯ ತೊಡಗಿದರೂ ಅವಳು ಏಳುವ ಸೂಚನೆ ಕಾಣಲಿಲ್ಲ. ಮಗು ತೊಡೆಯ ಮೇಲೆ ನಿದ್ದೆ ಹೋಗುತ್ತಿತ್ತು. ಕನಸಿನಲ್ಲೆಂಬಂತೆ ಇಳಿದು ಕೆಳಗೆ ಬಂದು ನಿಂತಳು. "ಏನು ಮಾಡ್ತಿಯಮ್ಮಾ, ನಾನು ಹೋಗಬೇಕು. ನನಗೆ ಇನೇ ಕೊನೆ ಬಸ್". "ನೀವು ಹೋಗಿ" ಒಲ್ಲದ ದನಿಯಲ್ಲಿ ಹೇಳಿದಳು. "ನನಗೆ ತುಂಬಾ ಹಸಿವಾಗುತ್ತೆ, ಎಲ್ಲಾದರೂ ಒಂದು ಲೋಟಾ ನೀರು ಕೊಡ್ಸಿ ಹೋಗಿ".

"ನೀನು ಏನು ಮಾಡ್ತೀಯಾ ಹೇಳು? ಎಲ್ಲಿಗೆ ಹೋಗ್ತೀಯಾ? ಇಷ್ಟು ಹೊತ್ತಿನಲ್ಲಿ ಇಲ್ಲಿ ಹೀಗೆ ನಿಂತುಕೊಳ್ಳುವುದು ನಿನಗೇ ಅಪಾಯ". ನನ್ನ ಮನಸ್ಸಿನ ನೆಮ್ಮದಿಗಾಗಿ ಒತ್ತಾಯ ಮಾಡುತ್ತಿದ್ದೆ.

"ರೈಲಿಗೆ ತಲೆಕೊಟ್ಟು ನಾನು ನನ್ನ ಮಗು ಇಬ್ಬರೂ ಸಾಯ್ತೀವಿ".

ಒಂದು ಕ್ಷಣ ತುಂಬಾ ಸಿಟ್ಟು ಬಂತು. ಇವಳು ನನ್ನ ಹತ್ತಿರವೇ ಯಾಕೆ ಈ ಮಾತು ಹೇಳ್ಬೇಕು. ಅಂತ ಯೋಚಿಸುತ್ತಲೇ ಬಸ್ಸು ಬಂದಿದ್ದನ್ನು ಕಂಡು ಅವಸರಿಸ ತೊಡಗಿದೆ. ದಿಕ್ಕು ತೋಚದವಳಂತೆ, ಕಣ್ಣಲ್ಲಿ ಗಾಬರಿ ತುಂಬಿಕೊಂಡು ಮಗುವನ್ನು ಭುಜದ ಮೇಲೆ ಹಾಕಿಕೊಂಡು ನಿಂತಿದ್ದಳು. "ಈ ಬಸ್ಸು ಬಿಟ್ರೆ ನನಗೆ ಬೇರೆ ಬಸ್ಸು ಇಲ್ಲ. ಬಸ್ ಹೊರಡುವವರೆಗೆ ಅಲ್ಲೆ ಕುಳಿತು ಯೋಚನೆ ಮಾಡು" ಎಂದು ಕರೆದೆ. ಮೂಕ ಹಸುವಿನ ತರಹ ನನ್ನ ಹಿಂಬಾಲಿಸಿದಳು.

ಅವಳು ಏನು ನಿರ್ಧಾರ ಮಾಡುತ್ತಾಳೆ? ನಿರ್ಧಾರ ಮಾಡಲು ಅವಳಿಗೇನಾದರೂ ಆಯ್ಕೆಯ ಮಾರ್ಗಗಳಿವೆಯೆ? ನಾನು ಯಾಕೆ ಈ ಕ್ಷಣದಲ್ಲಿ ನಿರ್ಧಾರ ಮಾಡು ಎಂದು ಒತ್ತಾಯ ಮಾಡಬೇಕು? ಅವಳು ಸಾಯುತ್ತೇನೆನ್ನುವುದು ನಿಜವೆ? ಈ ಗಳಿಗೆಯನ್ನು ತಪ್ಪಿಸಿದರೆ ಅವಳು ಬದುಕುಳಿದಾಳೆಯೇ? ಒಂದೆರಡು ದಿನ ಮನೆಗೆ ಕರೆದುಕೊಂಡು ಹೋಗಬಹುದು. ಆಮೇಲೆ ನಿನ್ನ ದಾರಿ ನೀನು ನೋಡಿಕೊ ಎಂದು ಹೇಗೆ ಹೇಳುವುದು? ಹೇಳದೆ ಇರಲು ಸಾಧ್ಯವೆ? ಚಳಿಯಲ್ಲಿ ಮಗುವನ್ನು ತಬ್ಬಿಕೊಂಡು ಕುಳಿತ ಈ ಹೆಂಗಸನ್ನು ನಾನೇನಾದರೂ ಹೀಗೇ ಬಿಟ್ಟು ಹೋಗಿ ನಾಳೆ ದಿನ ಪತ್ರಿಕೆಯಲ್ಲಿ ಇವಳ ಸಾವಿನ ಸುದ್ದಿಯನ್ನು ಓದಿದರೆ, ನೆಮ್ಮದಿಯಿಂದ ಇರಲಾದೀತೆ? ಹೀಗೆ ಪ್ರಶ್ನೆಗಳು ಒಂದಾದ ಮೇಲೊಂದರಂತೆ ನನ್ನನ್ನು ದಾಳಿ ಮಾಡುತ್ತಿದ್ದ ಹಾಗೆಯೇ ಕಂಡಕ್ಟರ್ ಬಂದಿದ್ದರಿಂದ ಕಾಡುಗುಡಿಗೆ ಎರಡು ಟಿಕೆಟ್ ಕೊಡಿ ಎಂದೆ. ಅವಳು ತನ್ನಲ್ಲಿರುವ ಚಿಲ್ಲರೆ ಕಾಸು ಕೊಡಲು ಬಂದಳು. ನಾನು ಪರವಾಗಿಲ್ಲ ಬೇಡ ಎಂದೆ.

ಬಸ್ಸು ಹೊರಟ ಹಾಗೆ ಅವಳ ಮನಸ್ಸಿನ ನೆಮ್ಮದಿಯ ನಿಟ್ಟುಸಿರು ನನ್ನ ನೆಮ್ಮದಿಯನ್ನು ಕಲಕಿತು. ಇವಳನ್ನು ಕರೆದುಕೊಂಡು ಹೋಗಿ ಏನು ಮಾಡುವುದು? ನಮ್ಮ ಜೀವನನ್ನು ನೋಡಿಕೊಳ್ಳುವುದೇ ಒಂದು ದೊಡ್ಡ ಸಮಸ್ಯೆಯಾಗಿರುವಾಗ ಇವರನ್ನು ಹೇಗೆ ನೋಡಿಕೊಳ್ಳುವುದು? ಮನೆಗೆ ಬಂದವಳನ್ನು ಹೊರಟು ಹೋಗು ಎಂದು ಹೇಗೆ ಹೇಳುವುದು? ಬೇರೆ ವ್ಯವಸ್ಥೆ, ಅಭಯಾಶ್ರಮ, ಸುಮಂಗಲಿ ಸೇವಾಶ್ರಮ...........

ಹೊಟ್ಟೆ ಹಸಿಯುತ್ತೆ ಎಂದ್ರೂ, ಅವಳಿಗೆ ತಿನ್ನಲು ಕೊಡಿಸಲು ನನ್ನ ಬಳಿ ಹಣ, ಸಮಯ ಎರಡೂ ಇರಲಿಲ್ಲ. ಹೊರಗಡೆ ತಿಂದ್ರೆ ಐದುರೂ. ಗಿಂತ ಹೆಚ್ಚು ಖರ್ಚಾಗುತ್ತೆ ಎಂದು ಡಬ್ಬಿಯಲ್ಲಿ ತಿಂಡಿ ತಗೊಂಡು ಹೋಗಿದ್ದೆ. ಅದೇ ಹಣ ಇದ್ರೆ ನಾಳೆ ಬಸ್ ಛಾರ್ಜ್‌ಗಾಗುತ್ತೆ ಎಂದುಕೊಂಡಿದ್ದೆ. ಅದನ್ನೇ ಅವಳ ಛಾರ್ಜ್‌ಗೆ ಕೊಟ್ಟು ಮನೆಗೆ ಕರೆದುಕೊಂಡು ಹೋಗಿ ಹೊಟ್ಟೆ ತುಂಬಾ ಊಟ ಹಾಕಬಹುದ ಎಂದು ಸಮಾಧಾನ ಮಾಡಿಕೊಂಡೆ.

ಇವಳಿಗೆ ನೆರವಾಗುವುದೆಂದರೆ, ಒಂದು ಕೆಲಸಾ.... ತಲೆ ಮೇಲೊಂದು ಸೂರು, ಬೇಕಾದ ಬಟ್ಟೆ, ಬರೆ, ಪಾತ್ರೆ, ಹಾಸಿಕೊಳ್ಳಲು........ ಮನೆಕೆಲ್ಸಾ ಮಾಡ್ತೀನಿ ಅಂತಾಳೆ........ ಮಗುವನ್ನು ಹೇಗೆ ನೋಡಿಕೊಳ್ತಾಳೆ ಒಬ್ಬಳೇ ಇರಬಲ್ಲಳೆ? ಚಿಕ್ಕದಾದ ಮನೆಯೆಂದರೂ ಬಾಡಿಗೆ, ದಿನನಿತ್ಯ ಇವಳ ನೋವುಗಳನ್ನು ಹಂಚಿಕೊಳ್ಳುವುದು........ ಇವಳ ಗಂಡ ಇವಳನ್ನು ಹುಡುಕುವುದಿಲ್ಲವೆ? ಬಂದು ಕರೆದರೆ ಹೋಗಲಾರಳೆ? ಪ್ರಾಕ್ಟಿಕಲ್ ಸಮಸ್ಯೆಗಳು. ಇವಳು ತನ್ನ ಪಕ್ಕದಲ್ಲಿಯೇ ಯಾಕೆ ಬಂದು ಕುಳಿತುಕೊಂಡಳು? ಬೇರೆ ಎಲ್ಲೂ ಯಾಕೆ ಜಾಗ ಸಿಗಲಿಲ್ಲ. ನಾನೇ ಇವಳನ್ನು ಮಾತನಾಡಿಸದೆ ಇದ್ದಿದ್ದರೆ ಅವಳು ಏನೂ ಹೇಳುತ್ತಿರಲಿಲ್ಲವೇನೋ? ಅವಳು ಬೇರೆಲ್ಲಾದರೂ ಕುಳಿತುಕೊಂಡಿದ್ದಿದ್ದರೆ ನಾನು ಗಮನಿಸುತ್ತಿದ್ದೆನಾ? ಆಗ ಈ ಸಮಸ್ಯೆಯೇ ಉಂಟಾಗುತ್ತಿರಲಿಲ್ಲವೇನೋ........ ಆ ಗಳಿಗೆಯಲ್ಲಿ ಹೀಗೆನಿಸಿದ್ದು ನಿಜ.

ವೈಯುಕ್ತಿಕವಾಗಿ ತೀವ್ರ ಸ್ಥರದಲ್ಲಿ ನೋವುಂಡ ಮಹಿಳೆಯರಿಗೆ ನೀಡುತ್ತಿದ್ದ ಆದರ, ಆದ್ರತೆ, ಅಂತಹವರು ಚಳವಳಿಯ ಹೃದಯ ಚಾಲನೆಯನ್ನು ನೀಡಬಲ್ಲವರು ಎಂದಿದ್ದ ನನ್ನ ನಂಬಿಕೆ ಇತ್ತೀಚಿನ ದಿನಗಳಲ್ಲಿ ಭ್ರಮೆಯೇನೋ ಎಂದೆನಿಸಿಬಿಟ್ಟಿದೆ. ಈ ರೀತಿ ನೆರವರಸಿ ಬಂದ ಗೆಳತಿಯರು ನೆಪವಾಗತೊಡಗಿದರು. ಇವರು ಸಂಘಟನೆಗಳಿಂದ ನಿರೀಕ್ಷಿಸುವುದು ಕೇವಲ ಸಹಾಯವನ್ನೇ? ನಾವೆತ್ತುವ ಐತಿಹಾಸಿಕ ಪ್ರಶ್ನೆಗಳು ಅವರ ಪ್ರಶ್ನೆಗಳಾಗಲಾರವೇಕೆ? ಅವರ ಒಂದಿಷ್ಟು ಸಮಸ್ಯೆಗಳು ಪರಿಹಾರವಾದ ಮೇಲೂ ಅವರು ನಮ್ಮ ಕಿರು ಪ್ರಯತ್ನಗಳೊಂದಿಗೆ ಕೈಗೂಡಿಸಲಾರರೇಕೆ? ಸಂಘಟನೆಗಾಗಿ ಏನನ್ನು ನಿರೀಕ್ಷಿಸುವುದೂ ಅಸಾಧ್ಯವೆ? ಯಾಕೆ ಅವರು ನಮ್ಮ ಪ್ರಯತ್ನಗಳೊಂದಿಗೆ ಗುರುತಿಸಿಕೊಳ್ಳಲಾರರು? ಅವರ ತುರ್ತುಗಳಿಗೆ ಮಾತ್ರ ನಾವು ಪ್ರತಿಕ್ರಿಯಿಸುವುದು........ನಮ್ಮ ಶ್ರಮ, ಸಮಯ, ಹಣ, ನಮ್ಮೆಲ್ಲರ ಅಸಹಾಯಕತೆ........ಅಂತಿಮವಾಗಿ ನಮ್ಮ ಮನಸ್ಸಿನ ನೆಮ್ಮದಿಗಾಗಿ........ಹೀಗೆ ತುಂಡು ತುಂಡು ಆಲೋಚನೆಗಳು.

26ನೇ ಪುಟ ನೋಡಿ.

---

22ನೇ ಪುಟದಿಂದ

ಅತ್ಯಾಚಾರ, ವರದಕ್ಷಿಣೆ ಹಿಂಸೆ, ವೇಶ್ಯಾವೃತ್ತಿ, ದೈಹಿಕ ಪೆಟ್ಟಿಗೆ ಬಲಿಯಾಗುವ ಹಾಗೂ ತಮ್ಮ ತಾಯ್ತನ ತಾವೇ ನಿರ್ಧರಿಸುವ ಹಕ್ಕು ಇಲ್ಲದಿರುವಂತಹ ದೌರ್ಜನ್ಯ ಕ್ರೌರ್ಯಗಳಿಂದ ಬಿಡುಗಡೆ ಸಿಗುವುದು, ಇದಲ್ಲದೆ ಹಿಂಸೆ, ಯುದ್ಧ. ಸೈನ್ಯದ ದುರಾಕ್ರಮಣಗಳನ್ನು ಸ್ತ್ರೀ ವಾದ ಪ್ರಬಲವಾಗಿ ವಿರೋಧಿಸುತ್ತದೆ. ಮತ್ತು ಸಮಾಜದಲ್ಲಿನ ತೀರ ಬಡವರ, ಕೆಳವರ್ಗದ ಮಂದಿಯ ಪರವಾಗಿ ಸಾಮಾಜಿಕ ಹಾಗೂ ಆರ್ಥಿಕ ನ್ಯಾಯವನ್ನು ಬಯಸುತ್ತದೆ.

ಇದ್ಯಾವುದೂ ನನ್ನನ್ನು ಕಂಗೆಡಿಸವುದಿಲ್ಲ. ಆದರೆ ಪುರುಷನಾಗಲೀ, ಸ್ತ್ರೀಯಾಗಲೀ ಕಾಳಜಿ ಹೊಂದಿರುವ, ಯಾವುದೇ ತತ್ವ ಪ್ರತಿಪಾದಿಸಿದರೂ ಈ ರೀತಿಯ ಆರೋಗ್ಯಯುಕ್ತವಾದ, ಪರಿಪೂರ್ಣವಾದ, ಮಾನವೀಯ ವಿಚಾರಧಾರೆಯಿಂದ ತಮ್ಮನ್ನು ಯಾಕ ಬೇರ್ಪಡಿಸಿಕೊಂಡು ನೋಡಲು ಬಯಸುತ್ತಾರೆಂಬುದೇ ನನಗೆ ಅರ್ಥವಾಗುವುದಿಲ್ಲ. ಹಾಗಿದ್ದಾಗ ಆ ವ್ಯಕ್ತಿ ವಿಶ್ವದ ಅರ್ಧದಷ್ಟು ಜನಾಂಗ ಗುಲಾಮರಾಗಿದ್ದಾಗ ಮಾತ್ರ ಪ್ರಪಂಚದ ಉಳಿವು ಎನ್ನುವ ಬಲವತ್ತರವಾದ ನಂಬಿಕೆ ಉಳ್ಳವರಾಗಿರುತ್ತಾರೆ.

ಆದರೆ ಜಗತ್ತಿನಲ್ಲಿ ಅರ್ಧದಷ್ಟು ಜನ ಗುಲಾಮರಾಗಿದ್ದರೆ ಈ ಜಗತ್ತು ಉಳಿಯುವುದಿಲ್ಲ. ಎನ್ನುವುದನ್ನು ನಾನು ನಂಬುತ್ತೇನೆ. ಆದ್ದರಿಂದಲೇ ನಾನು ಒಬ್ಬ ಸ್ತ್ರೀ ವಾದಿಯಾಗಿದ್ದೇನೆ.

ಶ್ರೀಲತಾ ಬಾಟ್ಲಿವಾಲ

25ನೇ ಪುಟದಿಂದ

ಬಸ್ ಇಳಿಯುತ್ತಿದ್ದಂತೆ, ಮಗು ಹಾಲು ಕುಡಿದಿರುತ್ತೋ ಇಲ್ವೋ, ಊಟ ಮಾಡದೆ ಮಲಗಿ ಬಿಟ್ಟರೆ, ರಾಮಯ್ಯ ಮನೆಗೆ ಬಂದಿರದಿದ್ದರೆ? ಇಷ್ಟು ಹೊತ್ತಿಗೆ ಮನೆಗೆ ಹೋಗಿ ಬೇಯಿಸಿಕೊಳ್ಳಬೇಕಲ್ಲಪ್ಪ ಎಂಬ ಯೋಚನೆಗಳಿಂದ ದಾಪುಗಾಲು ಹಾಕತೊಡಗಿದೆ. ಅವಳೂ ನನ್ನನ್ನು ಹಿಂಬಾಲಿಸಿದಳು.

ಮನೆಯಲ್ಲಿ ಬೆಳಕು ನೋಡಿ ನೆಮ್ಮದಿಯಾಯ್ತು ಅವಳನ್ನು ಒಳಗೆ ಕರೆದು ಕೈಕಾಲು ತೊಳೆಯೆಂದು ಹೇಳಿ ಊಟ ಬಡಿಸಿದೆ. ಹಸಿವಿನಿಂದ ಕಂಗೆಟ್ಟಿದ್ದ ಆಕೆ ದೊಡ್ಡ-ದೊಡ್ಡ ತುತ್ತುಗಳನ್ನು ಬಾಯಿಗೆ ತುರುಕಿಕೊಂಡಳು. ಮೇಲೆ-ಮೇಲೆ ನೀರು ಕುಡಿಯುತ್ತಾ ಊಟ ಮಾಡಿದ್ಲು

ಹಾಸಿಗೆ ಹಾಕಿ, ಮಲಗು ಎಂದರೆ, "ಬೇಡಕ್ಕ, ನೆಲದ ಮೇಲೆ ಹಾಸಿಕೊಳ್ಳಲು ಏನಾದರೂ ಕೊಡಿ, ಹಾಗೆ ಮಲಗುತ್ತೇವೆ" ಎಂದು ಹಠ ಹಿಡಿದಳು. ಪರ್ವಾಗಿಲ್ಲ, ಹಾಸಿಗೆ ಮೇಲೆ ಮಲಗು, ತುಂಬಾ ಚಳಿಯಿದೆ, ಮಗುಗೂ ಚಳಿಯಾಗುತ್ತೆ — ಅಂದ್ರೆ ಮಗು ಉಚ್ಚೆ ಮಾಡುತ್ತೆ — ಅಂದ್ಲು. ಪರವಾಗಿಲ್ಲ ಅಂತ ಒತ್ತಾಯ ಮಾಡಿದಾಗ ಹಾಸಿಗೆ ಮೇಲೆ ಮಲಗಿದ್ಲು.

ರಾತ್ರಿ ನಾನು ಬರೋದರೊಳಗೆ ಮಲಗಿಬಿಟ್ಟಿದ್ದ ನನ್ನ ಮಗ ಬೆಳಿಗ್ಗೆ ನಮ್ಮ ಮನೆಯಲ್ಲಿ ಇದ್ದ ಪಾಪುವನ್ನು ನೋಡಿ ಖುಷಿಯಿಂದ ಕುಣಿದು ಕುಪ್ಪಳಿಸತೊಡಗಿದ. ಬೆಳಿಗ್ಗೆ ಏಳುತ್ತಿದ್ದ ಹಾಗೆ "ನಾನು ಚೆನ್ನಪಟ್ಟಣದಲ್ಲಿರುವ ನನ್ನ ತಾಯಿ ಮನೆಗೆ ಹೋಗ್ತೀನಕ್ಕ" ಅಂತ ಅಂದ್ಲು. "ಆಯ್ತು, ಆದ್ರೆ ತಿಂಡಿ ತಿಂದು ಹೋಗು" ಅಂದಾಗ ಹೂಂ— ಎಂದು ತಲೆಯಲ್ಲಾಡಿಸಿದಳು.

ಅವಳು ಹೊರಟು ನಿಂತಾಗ ಕೂಡಿ ಹಾಕಿದ್ದ ಚಿಲ್ರೆ ಕಾಸನ್ನು ಎತ್ತಿ ಅವಳ ಕೈಯಲ್ಲಿಟ್ಟಾಗ, ಸಂಕೋಚದಿಂದ ಮುದುಡಿ ಮುದ್ದೆಯಾದಳು. ಅವಳು ಬಸ್ ಹತ್ತಿದಾಗ ನನ್ನ ಮಗ ಪಾಪು ಹೋಗೋದು ಬೇಡ ಅಂತ ಅಳಲು ಶುರುಮಾಡಿದ. ಆದ್ರೆ ನಾನು ಮಾತ್ರ ನೆಮ್ಮದಿಯಿಂದ ನಿಟ್ಟುಸಿರು ಬಿಟ್ಟೆ ?

ರಾಜೇಶ್ವರಿ ಎಚ್. ಎಸ್.

---

## ಓದುಗರಲ್ಲಿ ಮನವಿ

ಗಗನಕ್ಕೇರುತ್ತಿರುವ ಮುದ್ರಣ ಕಾಗದದ ಬೆಲೆ, ಅಂಚೆ ವೆಚ್ಚ ಮುಂತಾದವು ಗಳಿಂದಾಗಿ ಪತ್ರಿಕೆಯನ್ನು ಪ್ರಕಟಿಸುವುದು ಕಷ್ಟಕರವಾಗಿದೆ. ಮಾನಸಕ್ಕೆ ಆಸಕ್ತಿ ಹಾಗೂ ಪ್ರೋತ್ಸಾಹ ವ್ಯಕ್ತಪಡಿಸಿ ಪತ್ರ ಬರೆಯುವ ಸಹೃದಯರು ಹಾಗೂ ಚಂದಾ ಮುಗಿದಿರುವ ಓದುಗರು ತಕ್ಷಣ ಚಂದಾಹಣ ಕಳಿಸಿದರೆ ಪತ್ರಿಕೆಯನ್ನು ಉಳಿಸಿ ಬೆಳೆಸಲು ನೀರೆರೆದು ಪ್ರೋತ್ಸಾಹಿಸಿದಂತಾಗುತ್ತದೆ. ಓದುಗರೆಲ್ಲರನ್ನು ಉಳಿಸಿಕೊಳ್ಳಬೇಕೆಂದು ನಮ್ಮ ಅಪೇಕ್ಷೆಯಾದರೂ ಉಚಿತವಾಗಿ ಒಂದು ಸಂಚಿಕೆಯನ್ನು ಕಳಿಸಲು ಉಂಟಾಗುವ ಖರ್ಚನ್ನು ಭರಿಸುವುದು ಪತ್ರಿಕೆಗೆ ಹೊರೆಯಾಗುತ್ತದೆ. ಪ್ರಿಯ ಓದುಗರು ಸಹಕರಿಸಿ ತಕ್ಷಣ **20.00** ರೂ ಚಂದಾ ಹಣ ಕಳಿಸಿಕೊಡಬೇಕೆಂದು ಕೋರುತ್ತೇನೆ.

ಸಂ. ಮಂ.

---

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು — ೫೬೦೦೬೭.

ನಂ ಮ್ಯಾಗ್ (5) ಪಿಆರ್‌ಬಿ ಡಿಕ್ಲೇರ್ಡ್: 28/—8889

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ : "ಮಾನಸ"
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು—560067